# ಪ್ರೊ॥ ವ್ಹಿ.ಜಿ. ಅಂದಾನಿ

# Prof. V.G. Andani

ಪೀಟರ್ ಲೂಯಿಸ್

ಪ್ರಧಾನ ಸಂಪಾದಕರು

ಡಾ॥ ಶಿವಾನಂದ ಎಚ್. ಬಂಟನೂರ

ಲೇಖಕರು



ಕರ್ನಾಟಕ ಲಲಿತಕಲಾ ಅಕಾಡೆಮಿ

ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨

**Prof. V.G. ANDANI** - A monograph by Dr. Shivanandah Bantanur; Lecturer, Painting and Sculpture Faculty, Kannada Univercity, Hampi, 583276 and Published by Shri B.T. Munirajaiah, Registrar, Karnataka Lalithakala Academy, Kannada Bhavana, J.C. Road, Bangalore - 560 002. Tel: 080-22480297



First Edition: 2004
Translated by Dr. K. Raghavendra Rao

Pages: 48 + 8

Price: **Rs. 40/-**





ಶ್ರೀ ಬಿ.ಟಿ. ಮುನಿರಾಜಯ್ಯ
ಪ್ರಕಾಶಕರು / ರಿಜಿಸ್ಟ್ರಾರ್

ಶ್ರೀ ಪ.ಸ. ಕುಮಾರ್
ಪ್ರಕಟಣೆಯ ಸಮನ್ವಯಕಾರರು

ಮುಖಚಿತ್ರ: ಪ್ರೊ. ವ್ಹಿ.ಜಿ. ಅಂದಾನಿ ಅವರ ಕಲಾಕೃತಿ
ವಿನ್ಯಾಸ: ಶ್ರೀ ಸುಧಾಕರ ದರ್ಬೆ

ಮುದ್ರಕರು: ಪರಿಶ್ರೀ ಪ್ರಿಂಟರ್ಸ್
100/3, ನಾಗಪ್ಪ ಸ್ಟ್ರೀಟ್, ಪ್ಯಾಲೇಸ್ ಗುಟ್ಟಹಳ್ಳಿ
ಬೆಂಗಳೂರು - 560 003
ದೂರವಾಣಿ: 080-23368286

## ಅಧ್ಯಕ್ಷರ ಮಾತು

ಲಲಿತಕಲಾ ಅಕಾಡೆಮಿಯ ಅಧ್ಯಕ್ಷನಾಗಿ ಮೂರು ವರ್ಷಗಳಾಗುತ್ತಿದೆ. ಈ ಅವಧಿಯಲ್ಲಿ ನಾನು ಮತ್ತು ಸದಸ್ಯರ ತಂಡ ರೂಪಿಸಿ, ನಿರ್ವಹಿಸಿದ ಕಾರ್ಯಕ್ರಮಗಳನ್ನು ನಿಮ್ಮ ಮುಂದಿಡುವುದು ನನ್ನ ಜವಾಬ್ದಾರಿ ಹಾಗೂ ಸಂತೋಷದ ವಿಷಯ. ನಾವು ಮೂರು ವರ್ಷಗಳ ಕಾರ್ಯಕ್ರಮಗಳನ್ನು ರೂಪಿಸುವಾಗ ಯುವ ಪೀಳಿಗೆಗೆ ಸಿಂಹಪಾಲು ನೀಡಿದ್ದೇವೆ, ಹೊಸತನವನ್ನೂ ಕಾಪಾಡಿಕೊಂಡಿದ್ದೇವೆ.

'ಯಂಗ್ ಸ್ಟ್ರೋಕ್ಸ್', 'ನಿಮ್ಮೊಂದಿಗೆ ನಾವು', 'ಮನೆಗೊಂದು ಕಲಾಕೃತಿ', 'ಜನಪದ ಕೃತಿ-ಆಧುನಿಕ ಕೃತಿ', ಯುವಕಲಾವಿದರಿಗೆ ಫೆಲೋಶಿಪ್ ಮುಂತಾದ ನವೀನ ಹಾಗೂ ಉಪಯುಕ್ತ ಕಾರ್ಯಕ್ರಮಗಳನ್ನು ರೂಪಿಸಿದ್ದೇವೆ. ಕರ್ನಾಟಕವನ್ನು ನಾಲ್ಕು ವಿಭಾಗಗಳಾಗಿ ಮಾಡಿ, ಪ್ರತಿ ಕಾರ್ಯಕ್ರಮದಲ್ಲಿ ನಾಲ್ಕೂ ವಿಭಾಗದ ಕಲಾವಿದರಿಗೆ ಸಮಪಾಲು ದೊರಕುವಂತೆ ಮಾಡಿದ್ದು ಕಲಾವಿದರಿಗೆ ಸಂತಸ ತಂದಿದೆ.

ಈ ಎಲ್ಲಾ ಕಾರ್ಯಕ್ರಮಗಳು ಯುವಶಕ್ತಿಯ ಪಾಲಾದರೆ, ಚಿತ್ರದುರ್ಗದ ಸಾಣೆಹಳ್ಳಿಯಲ್ಲಿ ಹಿರಿಯ ಕಲಾವಿದರ ಶಿಬಿರ, ಬೆಂಗಳೂರಿನಲ್ಲಿ ಕಲಾವಿದೆಯರ ಶಿಬಿರ, ಬೆಂಗಳೂರು ಹಾಗೂ ಗುಲ್ಬರ್ಗಾದಲ್ಲಿ ಗ್ರಾಫಿಕ್ ಶಿಬಿರವನ್ನು ನಡೆಸಿದ್ದೇವೆ. ಶ್ರೀ ಜಿ. ಎಸ್. ದಂಡಾವತಿಮಠ ಹಾಗೂ ಡಾ|| ಎಂ.ವಿ. ಮಿಣಜಿಗಿಯವರ ಶತಮಾನೋತ್ಸವ ಕಾರ್ಯಕ್ರಮಕ್ಕೂ ಪರೋಕ್ಷವಾಗಿ ನಾವು ಕಾರಣಕರ್ತರಾಗಿದ್ದೇವೆ.

ಇದರೊಂದಿಗೆ ವಾರ್ಷಿಕ ಕಲಾಪ್ರದರ್ಶನ, ವಾರ್ಷಿಕ ಪ್ರಶಸ್ತಿ ಸಮಾರಂಭ, ಜಿಲ್ಲಾವಾರು ಕಲಾಶಿಬಿರ, ಏಕವ್ಯಕ್ತಿ ಹಾಗೂ ಸಮೂಹ ಕಲಾಪ್ರದರ್ಶನಗಳಿಗೆ ಧನಸಹಾಯ ಮುಂತಾದ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಿರ್ವಹಿಸಿದ್ದೇವೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯಕ್ರಮ, ಐಫಾಕ್ಸ್ ಕಲಾಪ್ರದರ್ಶನಗಳಿಗೆ ಸಹಯೋಗ ನೀಡಿದ್ದೇವೆ.

ಹಿರಿಯ ಕಲಾವಿದರಿಗೆ ನೀಡುವ ವಾರ್ಷಿಕ ಪ್ರಶಸ್ತಿಯ ಜೊತೆಗೆ ಕಲಾಕ್ಷೇತ್ರದ ಅಭಿವೃದ್ಧಿಗೆ ನಿಸ್ವಾರ್ಥ ಸೇವೆ ಸಲ್ಲಿಸಿದ ಚೇತನಗಳಿಗೆ ವಾರ್ಷಿಕ ಪುರಸ್ಕಾರವನ್ನು ನೀಡಿ ಗೌರವಿಸುವುದನ್ನು ಪ್ರಾರಂಭಿಸಿದ್ದೇವೆ. ಈ ವರ್ಷ ವಾರ್ಷಿಕ ಕಲಾ ಪ್ರದರ್ಶನದಲ್ಲಿ ನೀಡಿದ ಬಹುಮಾನಗಳನ್ನು ಹಿರಿಯ ಕಲಾವಿದರ ಹೆಸರಿನಲ್ಲಿ ನೀಡುವುದರೊಂದಿಗೆ ಅವರನ್ನು ಸ್ಮರಿಸಿದ್ದೇವೆ.



ಇಷ್ಟೆಲ್ಲಾ ಆದರೂ ಮನಸ್ಸಿನಲ್ಲಿ ಕೊರತೆ ಕಾಡುತ್ತಿದೆ. ರಾಷ್ಟ್ರಮಟ್ಟದ ಕಲಾಶಿಬಿರ, ರಾಷ್ಟ್ರಮಟ್ಟದ ವಿಚಾರಗೋಷ್ಠಿ, ಕಲಾಕೃತಿಗಳ ಮಾರಾಟ ಕೇಂದ್ರ, ಹಾಸನದಲ್ಲಿ ರಾಷ್ಟ್ರೀಯ ಕಲಾಗ್ರಾಮ, ವಿಭಿನ್ನ ಶೈಲಿಯ ಭಾವಚಿತ್ರದ ಶಿಬಿರವನ್ನು ಈ ಅವಧಿಯಲ್ಲಿ ನಡೆಸಲಾಗದಿದ್ದುದಕ್ಕೆ ನಮ್ಮ ಮನಸ್ಸುಗಳಲ್ಲಿ ಇನ್ನೂ ಅತೃಪ್ತಿ ಕಾಡುತ್ತಿದೆ.

ಕರ್ನಾಟಕ ಲಲಿತಕಲಾ ಅಕಾಡೆಮಿಯ ಹತ್ತು ಹಲವು ಕಾರ್ಯಕ್ರಮಗಳಲ್ಲಿ ಪುಸ್ತಕ ಪ್ರಕಟಣಾ ಯೋಜನೆಯೂ ಒಂದು. ಅದರ ಅಂಗವಾಗಿ ಪ್ರತಿ ಮೂರು ತಿಂಗಳಿಗೊಮ್ಮೆ **'ಕಲಾವಾರ್ತೆ'** ಎಂಬ ಸಂಚಿಕೆಯನ್ನು ಅಕಾಡೆಮಿ ನಿಯಮಿತವಾಗಿ ಪ್ರಕಟಿಸುತ್ತ ಬಂದಿದೆ. ಮುದ್ರಣ ಹಾಗೂ ವಿನ್ಯಾಸಗಳಲ್ಲಿ ಕಲಾತ್ಮಕತೆಗೆ ಒತ್ತುಕೊಟ್ಟು, ಕಲಾವಾರ್ತೆಯನ್ನು ವಾರ್ತಾ ಸಂಚಿಕೆಯಾಗಿಸದೆ ಸಂಗ್ರಹಯೋಗ್ಯ ಸಂಚಿಕೆಯನ್ನಾಗಿಸಿದ್ದೇವೆ. **ಕಲಾವಿದರ ಮಾಲಿಕೆಯಲ್ಲಿ** ಒಂಬತ್ತು ಜನ ಹಿರಿಯ ಕಲಾವಿದರಾದ ಕೆ. ಕೇಶವಯ್ಯ, ಎಸ್. ಕಾಳಪ್ಪ, ಎಚ್.ಎಸ್. ಇನಾಮತಿ, ರಘೋತ್ತಮ ಪುಟ್ಟಿ, ವ್ಹಿ.ಟಿ. ಕಾಳೆ, ಪುರುಷೋತ್ತಮ ಕಾರಂತ, ಎಂ.ಆರ್. ಬಾಳೀಕಾಯಿ, ವ್ಹಿ.ಜಿ. ಅಂದಾನಿ ಹಾಗೂ ಸಿ. ಚಂದ್ರಶೇಖರ್ ಅವರುಗಳ ಜೀವನ ಸಾಧನೆಗಳ ಪುಸ್ತಕಗಳು ಸಿದ್ಧಗೊಂಡಿವೆ. ಇವರಲ್ಲಿ ಮೂವರು ಕಲಾವಿದರು ಇಂದು ಇಲ್ಲವಾಗಿದ್ದಾರೆ. ಅವರ ಬಗ್ಗೆ ಮಾಹಿತಿ ಸಂಗ್ರಹಿಸುವುದು ಅತ್ಯಂತ ದುಸ್ತರ ಕಾರ್ಯವಾಗಿದ್ದು, ಆಯಾ ಲೇಖಕರು ಈ ಕಾರ್ಯವನ್ನು ಸಾಹಸವೆಂಬಂತೆ ತೆಗೆದುಕೊಂಡು ಬರೆದಿದ್ದಾರೆ. ಉಳಿದ ಲೇಖಕರು ತಮ್ಮ ಲೇಖನದ ಕಲಾವಿದರನ್ನು ಅನೇಕ ಬಾರಿ ಸಂಪರ್ಕಿಸಿ, ಸಂದರ್ಶಿಸಿ ಅಭ್ಯಾಸ ಪೂರ್ಣವಾಗಿ ಬರೆದಿದ್ದಾರೆ. ಈ ಎಲ್ಲ ಬರಹಗಾರರಿಗೆ ಮತ್ತು ಅದನ್ನು ಸಂಪಾದಿಸಿಕೊಟ್ಟ ಡಾ|| ಅ.ಲ. ನರಸಿಂಹನ್ ಅವರಿಗೆ ಅಕಾಡೆಮಿ ಪರವಾಗಿ ಧನ್ಯವಾದಗಳು. ಕರ್ನಾಟಕದ ಎಲ್ಲ ಜಿಲ್ಲೆಗಳ ಸಮಗ್ರ ಚಿತ್ರಕಲೆಯ ಸ್ಥೂಲನೋಟವನ್ನು ಒಂದೆಡೆಗೆ ತರುವ ಉದ್ದೇಶದಿಂದ **ಕರ್ನಾಟಕ ಚಿತ್ರಕಲಾ ದರ್ಶನ** ಎಂಬ ಬೃಹತ್ ಸಂಪುಟವನ್ನು ತರುತ್ತಿದ್ದು, ಅದಕ್ಕೆ ಹೆಚ್ಚಿನ ಅನುದಾನಕ್ಕಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. **ಜನಪ್ರಿಯ ಕಲಾಮಾಲೆಯ** ಅಡಿಯಲ್ಲಿ ಕರ್ನಾಟಕದ ದೇಶಿ ಚಿತ್ರಕಲೆಯನ್ನು ಪ್ರಾದೇಶಿಕ ವೈಶಿಷ್ಟ್ಯತೆಯ ಹಿನ್ನಲೆಯಲ್ಲಿ ಪರಿಚಯಿಸುವ ಹತ್ತು ಪುಸ್ತಕಗಳನ್ನು ತಜ್ಞ ವಿದ್ವಾಂಸರಿಂದ ಬರೆಯಿಸಿ ಇದೀಗ ಪ್ರಕಟಿಸುತ್ತಿದ್ದೇವೆ. ಅವುಗಳನ್ನು ಸುಂದರವಾಗಿ ಸಂಪಾದಿಸಿ ಕೊಟ್ಟ ಅಕಾಡೆಮಿಯ ಸದಸ್ಯರಾದ ಸಂಶೋಧಕ ಡಾ|| ಎಸ್.ಸಿ. ಪಾಟೀಲರು. ಅವರಿಗೆ ಅಕಾಡೆಮಿಯ ಪರವಾಗಿ ವಂದನೆಗಳು. ಅಕಾಡೆಮಿಯ ಇನ್ನೊಂದು ಗ್ರಂಥ ಭಾವಚಿತ್ರ ಪರಂಪರೆಯ **'ಮುಖಗಳೊಂದಿಗೆ ಮುಖಾಮುಖಿ'** ಅಧ್ಯಯನ ಯೋಗ್ಯ ಕೃತಿಯನ್ನು ನಮ್ಮ ಮನವಿಯಂತೆ ಬರೆದುಕೊಟ್ಟಿರುವ ವಿಮರ್ಶಕರಾದ ಶ್ರೀ ಕೆ.ವಿ. ಸುಬ್ರಹ್ಮಣ್ಯಂ ರವರಿಗೆ ಅಕಾಡೆಮಿಯ ಪರವಾಗಿ ವಂದನೆಗಳು. ಇದಲ್ಲದೆ ಇಪ್ಪತ್ತು ಹಿರಿಯ-ಕಿರಿಯ ಕಲಾವಿದರ ಕಲಾಕೃತಿಗಳ ಚಿತ್ರಸಂಪುಟವೊಂದು ಅಕಾಡೆಮಿ ಸದಸ್ಯ ಶ್ರೀ ಪ.ಸ. ಕುಮಾರ್ ಅವರ ಸಂಪಾದಕತ್ವದಲ್ಲಿ ಬರುತ್ತಿದೆ.

ನಾವು ಮೂರು ವರ್ಷಗಳಲ್ಲಿ ಮಾಡಿದ ಕಾರ್ಯಕ್ರಮಗಳ ಪಟ್ಟಿಯನ್ನು ವಾರ್ಷಿಕ ವರದಿಯಲ್ಲಿ ನೀಡುತ್ತಿದ್ದೇವೆ. ಎಲ್ಲಾ ಕಾರ್ಯಕ್ರಮಗಳಲ್ಲೂ ನಮ್ಮೊಡನೆ ಸಹಕರಿಸಿದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕೇಂದ್ರ ಲಲಿತಕಲಾ ಅಕಾಡೆಮಿ, ರೀಜನಲ್ ಸೆಂಟರ್ ಚೆನ್ನೈ, ಐಫಾಕ್ಸ್ ಸಂಸ್ಥೆಗಳಿಗೆ ನಮ್ಮ ವಂದನೆಗಳು.

ನನ್ನೊಡನೆ ಇದುವರೆಗೂ ಸಹಕರಿಸಿ ಉಪಯುಕ್ತ ಸಲಹೆಗಳನ್ನು ನೀಡಿದ ಸದಸ್ಯ ಮಿತ್ರರೆಲ್ಲರಿಗೂ ನನ್ನ ಇಡೀ ತಂಡದ ಪರವಾಗಿ ಹಾಗೂ ವೈಯಕ್ತಿಕವಾಗಿ ಮತ್ತೊಮ್ಮೆ ವಂದನೆಗಳನ್ನು ಸಲ್ಲಿಸುತ್ತಿದ್ದೇನೆ. ವಿಶೇಷವಾಗಿ ಸಮನ್ವಯಕಾರರಾಗಿ ಹಲವಾರು ಕಾರ್ಯಕ್ರಮಗಳನ್ನು ಆಗುಮಾಡಿದ ಸದಸ್ಯ ಶ್ರೀ ಪ.ಸ.ಕುಮಾರ್ ಅವರಿಗೆ ನನ್ನ ಕೃತಜ್ಞತೆಗಳು. ಈ ಎಲ್ಲ ಪ್ರಕಟಣೆಗಳೂ ವಿವಿಧ ಮುದ್ರಣಾಲಯಗಳಲ್ಲಿ ರೂಪತಳೆದಿದ್ದು, ಅವುಗಳ ಮಾಲೀಕರಿಗೆ, ಮುಖಚಿತ್ರವನ್ನು ಕಲಾಕೃತಿಯೆಂಬಂತೆಯೇ ರಚಿಸಿಕೊಟ್ಟ ಶ್ರೀ ಸುಧಾಕರ ದರ್ಬೆ ಅವರಿಗೆ, ಅಕಾಡೆಮಿ ರಿಜಿಸ್ಟ್ರಾರ್ ಶ್ರೀ ಬಿ.ಟಿ. ಮುನಿರಾಜಯ್ಯ ಮತ್ತು ಸಿಬ್ಬಂದಿ ವರ್ಗದ ರಾಜು, ವೆಂಕಟೇಶ್, ಗಂಗಾಧರ, ಮುತ್ತು, ಬಾಲು, ಲೋಕೇಶ ಮತ್ತು ಅರವಿಂದ ಅವರುಗಳಿಗೆ ಹಾಗೂ ಪ್ರತ್ಯಕ್ಷ, ಪರೋಕ್ಷವಾಗಿ ಬೆಂಬಲ ನೀಡಿದ ಮಹನೀಯರಿಗೆಲ್ಲಾ ನಮ್ಮ ಧನ್ಯವಾದಗಳು.

ನಮ್ಮ ಈ ಕಿರು ಪ್ರಯತ್ನಗಳನ್ನು ಕಲಾವಿದರು, ಸಹೃದಯ ಕಲಾಸಕ್ತರು ತುಂಬು ಹೃದಯದಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

**ಪೀಟರ್ ಲೂಯಿಸ್**

## ನಿಮ್ಮೊಂದಿಗೆ

ನಾನು ಅಂದಾನಿಯವರನ್ನು ಮೊದಲು ಭೇಟಿಯಾದದ್ದು ೧೯೯೨ರಲ್ಲಿ. ಆಗ ಲಲಿತಕಲಾ ಸ್ನಾತಕೋತ್ತರ ಪದವಿಗೆ ಪ್ರವೇಶ ಕೇಳಲು ಹೋಗಿದ್ದೆ. ಅವರಿಂದ ನಕಾರಾತ್ಮಕ ಪ್ರತಿಕ್ರಿಯೆ ಬಂದುದರಿಂದ ವಾದಿಸಿದ್ದೆ. ಒಂದು ಬಗೆಯಲ್ಲಿ ಇಬ್ಬರ ನಡುವೆ ವಾಗ್ಯುದ್ಧವೇ ನಡೆಯಿತೆನ್ನಿ.

ಔಪಚಾರಿಕವಾಗಿ ಅವರ ವಿದ್ಯಾರ್ಥಿಯಾಗುವ ನನ್ನಾಸೆಯೇನೋ ಈಡೇರಲಿಲ್ಲ. ಆದರೆ ನನ್ನ ಕಣ್ಣು, ಮನಸ್ಸುಗಳು ದೃಶ್ಯಕಲೆಯ ಸೂಕ್ಷ್ಮಸಂವೇದನೆಗಳ ಗ್ರಹಿಕೆಯಲ್ಲಿ ಆಸಕ್ತಿ ತಳೆಯುವ ಹೊತ್ತಿಗಾಗಲೇ ಅವರ ಸಂಸ್ಥೆಯಲ್ಲಿ ಬೋಧನೆ ಮಾಡುವ ಅವಕಾಶ ದೊರೆತದ್ದು ಒಂದು ಆಕಸ್ಮಿಕ.

ಮೊದಲಿನಿಂದಲೂ ಯಾವುದನ್ನೇ ಆಗಲಿ ವಿಮರ್ಶಾತ್ಮಕವಾಗಿ ನೋಡುವ, ಪ್ರಶ್ನಿಸುವ ನನ್ನ ಸ್ವಭಾವ ವಿಮರ್ಶಾಲೇಖನಗಳನ್ನು ಬರೆಯಲು ತೊಡಗಿತ್ತು. ಹಡಪದವರ ವಿದ್ಯಾರ್ಥಿಯಾದಾಗಿನಿಂದ ಅದು ಮತ್ತಷ್ಟು ಹೊಳಪು ಪಡೆದಿತ್ತು. ನಾನು ಬೋಧನೆಯೊಂದಿಗೆ ಪಿಎಚ್.ಡಿ. ಅಧ್ಯಯನದಲ್ಲಿ ತೊಡಗಿದ್ದಾಗಲೇ ಅಂದಾನಿಯವರು ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾದರು. ಇದೇ ಸಂದರ್ಭದಲ್ಲಿ 'ಆರ್ಟಗುಲ್' ಪತ್ರಿಕೆಯನ್ನು ತಂದರು. ಹೀಗಾಗಿ ನಾನು ಕಲಾಸೃಷ್ಟಿಗಿಂತ ಕಲಾಬರಹಕ್ಕೆ ಹೆಚ್ಚು ಒತ್ತು ಕೊಡುವಂತಾಯಿತು. ಈ ನಡುವೆ ಅಂದಾನಿಯವರ ಕಲಾಕೃತಿಗಳ ಕುರಿತು ಬರೆಯಬೇಕೆಂದಿದ್ದೆ, ಒತ್ತಡಗಳ ಮಧ್ಯೆ ಸಾಧ್ಯವಾಗಲಿಲ್ಲ. ಆದರೆ ಅವರ ರೇಖಾಚಿತ್ರಗಳ ಕುರಿತು ಸಣ್ಣದೊಂದು ಲೇಖನ ಬರೆದೆ. ಅವರ ಅಪೇಕ್ಷೆಯಂತೆ ಅದು 'ಸಂಕುಲ'ದಲ್ಲಿ ಪ್ರಕಟಗೊಂಡಿತು ಅಷ್ಟೆ.

ಇದೀಗ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗದಲ್ಲಿ ಅಧ್ಯಾಪಕ ವೃತ್ತಿ ಕೈಗೊಂಡಿರುವಂತೆಯೇ ತುರ್ತಾಗಿ ಈ ಪುಸ್ತಕ ಬರೆದುಕೊಡುವಂತೆ ಲಲಿತಕಲಾ ಅಕಾಡೆಮಿಯಿಂದ ಆಹವಾಲು. ಎರಡು ದಿನ ಅಂದಾನಿಯವರ ಸಮಯ ನುಂಗಿ ಬಂದೆ. ಸಂತೋಷದಿಂದ ಈ ಪುಸ್ತಕ ಬರೆದೆ.

ಸುತ್ತಲೂ ಕಲ್ಲು ಬೆಟ್ಟಗಳಿಂದಾವೃತವಾಗಿರುವ ವಿದ್ಯಾರಣ್ಯ ಆವರಣದ ಹಚ್ಚಹಸಿರಿನ ಮಧ್ಯೆ ಇರುವ ಅತಿಥಿಗೃಹ 'ಶ್ರೀಶೈಲ'ದಲ್ಲಿ ಒಂದು ತಿಂಗಳ ಕಾಲ ಈ ಬರಹ ಕೆನೆಗಟ್ಟುವಾಗ ನನ್ನ ಜೊತೆಗಿದ್ದು ಸಲಹೆ ಸೂಚನೆ ನೀಡಿದ ಪ್ರೊ। ವಿ.ಬಿ. ಹಿರೇಗೌಡರ ಹಾಗೂ ಸದಾ ನನ್ನನ್ನು ಬರೆಯಲು ಪ್ರೇರೇಪಿಸುತ್ತಿದ್ದ ಆರ್.ಎಂ. ಹಡಪದ ಹಾಗೂ ಪ್ರೋತ್ಸಾಹಿಸುತ್ತಿರುವ ಶ್ರೀಯುತರಾದ ಜೆ.ಎಸ್. ಖಂಡೇರಾವ್, ಡಾ।। ಎಸ್.ಸಿ. ಪಾಟೀಲ, ದೃಶ್ಯ ಸೂಕ್ಷ್ಮಜ್ಞರಾದ ಪ್ರೊ।। ಎಂ.ಹೆಚ್. ಕೃಷ್ಣಯ್ಯ, ಕೆ.ವಿ. ಸುಬ್ರಹ್ಮಣ್ಯಂ, ಚಿ.ಸು. ಕೃಷ್ಣಸೆಟ್ಟಿ, ಕೆ.ಎಸ್. ಶ್ರೀನಿವಾಸಮೂರ್ತಿ, ಎಚ್.ಎ. ಅನಿಲಕುಮಾರ್, ಡಾ।। ಅ.ಲ. ನರಸಿಂಹನ್, ಮಾರ್ಥಾ, ಮರಿಶಾಮಾಚಾರ್, ಡಾ।। ವಿಜಯಾ, ಸಹೃದಯತೆಯಿಂದ ನನ್ನ ಕಲಾಕೃತಿಗಳನ್ನು ಕೊಳ್ಳುವುದರೊಂದಿಗೆ ನನ್ನ ವೈಚಾರಿಕ ನಂಬಿಕೆಯನ್ನು ಜೀವಂತವಾಗಿರಿಸಿದ ಡಾ।। ಅಶೋಕ ಶೆಟ್ಟರ್, ಶಿವಾನಂದ ಶೆಟ್ಟರ್, ರವಿ ಬೆಳಗೆರೆ, ಡಾ।। ಸಿದ್ದನಗೌಡ ಪಾಟೀಲ, ಗೆಳೆಯ ಉಮೇಶ ಹಿರೇಮಠ, ನನ್ನ ಕಲಾಧರ್ಮಕ್ಕೆ ವಿಜ್ಞಾನದ ಸ್ಪರ್ಶ ನೀಡುವ ಸಂಗಾತಿ ಶ್ರೀಮತಿ ಅಲಕಾ, ಈ ಪುಸ್ತಕ ಬರೆಸಲು ಕಾರಣರಾದ ಅಕಾಡೆಮಿಯ ಅಧ್ಯಕ್ಷರಾದ ಪೀಟರ್ ಲೂಯಿಸ್, ರಿಜಿಸ್ಟ್ರಾರ್ ಬಿ.ಟಿ. ಮುನಿರಾಜಯ್ಯ ಮತ್ತು ಈ ಪುಸ್ತಕವನ್ನು ಅರ್ಥಪೂರ್ಣವಾಗಿ ಇಂಗ್ಲೀಷಿಗೆ ಅನುವಾದಿಸಿದ ಡಾ।। ಕೆ. ರಾಘವೇಂದ್ರರಾವ್ ಮತ್ತು ಇವರನ್ನು ಪರಿಚಯಿಸಿದ ಖ್ಯಾತ ವಿಮರ್ಶಕರಾದ ಡಾ।। ಗಿರಡ್ಡಿ ಗೋವಿಂದರಾಜ್ ಅಲ್ಲದೆ ಪ್ರಕಟಣಾ ಸಮಿತಿ ಹಾಗೂ ಸದಸ್ಯರಿಗೆ ನಾನು ಕೃತಜ್ಞನಾಗಿದ್ದೇನೆ.

ಡಾ।। ಶಿವಾನಂದ ಎಚ್. ಬಂಟನೂರ



## ಡಾ॥ ಶಿವಾನಂದ ಹನುಮಂತರಾಯ ಬಂಟನೂರ



ಬಿಜಾಪುರ ಜಿಲ್ಲೆ ಸಿಂದಗಿ ತಾಲ್ಲೂಕಿನ ಖೈನೂರರಲ್ಲಿ ೧೯೬೭ರಲ್ಲಿ ಜನಿಸಿದ ಡಾ॥ ಶಿವಾನಂದ ಬಂಟನೂರರು ಚಿತ್ರ ಕಲೆಗೆ ಸಂಬಂಧಿಸಿದಂತೆ ಎ.ಎಂ., ಜಿ.ಡಿ (ಆರ್ಟ್)ಗಳಲ್ಲದೆ ಸ್ನಾತಕೋತ್ತರ ಪದವಿಯನ್ನು ಹಾಗೂ ಕನ್ನಡದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಸಂಶೋಧನಾ ಅನುದಾನ ಪಡೆದು ೨೦೦೨ರಲ್ಲಿ 'ಕರ್ನಾಟಕ ಜನಪದ ಶಿಲ್ಪಕಲೆ' ಕುರಿತು ಪಿಎಚ್.ಡಿ. ಪದವಿ ಪಡೆದಿದ್ದಾರೆ. ಮೂಲತ ಕಲಾವಿದರಾದ ಬಂಟನೂರ ಅವರು ಬೆಂಗಳೂರಿನ ವೆಂಕಟಪ್ಪ ಕಲಾಶಾಲೆ ಸೇರಿದಂತೆ ಹಲವಾರು ಕಡೆಗಳಲ್ಲಿ ಏಕವ್ಯಕ್ತಿ ಪ್ರದರ್ಶನವನ್ನೂ ಪೂನಾ, ಗೋವ ತಮಿಳುನಾಡು ಸೇರಿದಂತೆ ರಾಜ್ಯದ ಹಲವಾರು ಕಡೆ ಸಮೂಹ ಪ್ರದರ್ಶನಗಳಲ್ಲಿ ಬಾಗವಹಿಸಿದ್ದಾರೆ. ಚಿತ್ರಕಲೆಯ ಸ್ನಾತಕೋತ್ತರ ವ್ಯಾಸಂಗದಲ್ಲಿ ಪ್ರಥಮ ರ್‍ಯಾಂಕ್ ಪಡೆದಿದ್ದಕ್ಕೆ "ಚಿನ್ನದ ಪದಕ" ಪ್ರಶಸ್ತಿಯಲ್ಲದೆ, ರಾಜ್ಯ ಲಲಿತಕಲಾ ಅಕಾಡೆಮಿ ಹಾಗೂ ಇನ್ನಿತರ ಸಂಸ್ಥೆಗಳಿಂದ ಕೃತಿಗಳಿಗೆ ವಿವಿಧ ಪ್ರಶಸ್ತಿಗಳನ್ನು ಪಡೆದಿದ್ದಾರೆ. ರಾಜ್ಯ ಮಟ್ಟದ ನಾಲ್ಕಾರು ಕಲಾಶಿಬಿರಗಳಲ್ಲಿ ಭಾಗವಹಿಸಿದ್ದಾರೆ.

ಸಾಹಿತ್ಯಾತ್ಮಕವಾಗಿ ಚಿತ್ರ ಶಿಲ್ಪ ಕುರಿತ ಮುವತ್ತಕ್ಕೂ ಹೆಚ್ಚು ಸಂಶೋಧನಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಆಕಾಶವಾಣಿಗೆ ಕಲೆಯನ್ನು ಕುರಿತು ಭಾಷಣಗಳನ್ನು ನೀಡಿರುವುದಲ್ಲದೆ, ರಾಜ್ಯ ಲಲಿತ ಕಲಾ ಅಕಾಡೆಮಿಯ ವತಿಯಿಂದ ಉತ್ತರ ಕರ್ನಾಟಕ ಬಾಗದ ಒಂಬತ್ತು ಮಂದಿ ಕಲಾವಿದರ ಸಂದರ್ಶನ ಮಾಡಿದ್ದು ಚಿತ್ರ ಸುರಳಿಯಾಗಿ (ವಿಡಿಯೋ) ರೂಪಿಸಿಕೊಟ್ಟಿದ್ದಾರೆ. ಪತ್ರಿಕೆಯೊಂದರ ಸಂಪಾದನಾ ಕಾರ್ಯವೂ ಸೇರಿದಂತೆ ನೆನಪಿನ ಸಂಚಿಕೆಗಳ ಸಂಪಾದನೆ ಮಾಡಿದ್ದು ಕವಿತಾ ಸಂಗ್ರಹವೊಂದ ಪ್ರಕಟವಾಗಿದೆ. ಪಿಎಚ್.ಡಿ. ನಿಬಂಧ ಹಾಗೂ ಲೇಖನಗಳ ಸಂಗ್ರಹಗಳು ಮುದ್ರಣ ಹಂತದಲ್ಲಿವೆ. ಶ್ರೀಯುತರ ಕಲಾಕೃತಿಗಳು ಗದಗ, ಧಾರವಾಡ, ಗುಲಬರ್ಗ, ಹಂಪಿ, ಬೆಂಗಳೂರು ಇತ್ಯಾದಿ ಕಡೆಯ ಕಲಾ ಸಂಸ್ಥೆಗಳಲ್ಲಿ ಸಂಗ್ರಹಿತಗೊಂಡಿವೆ.

ಡಾ॥ ಶಿವಾನಂದ ಬಂಟನೂರ ಅವರು ಮೊದಲಿಗೆ ಧಾರವಾಡದ ಸೃಜನ ಕಲಾಸಂಸ್ಥೆಯ ಲಲಿತಕಲಾ ಮಹಾವಿದ್ಯಾಲಯ ನಂತರ ಕಲಬುರ್ಗಿಯ ಐಡಿಯಲ್ ಫೈನ್ ಆರ್ಟ್ಸ್ ಸಂಸ್ಥೆಗಳಲ್ಲಿ ಅಧ್ಯಾಪಕರಾಗಿದ್ದು ಪ್ರಸ್ತುತ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಲಲಿತ ಕಲಾ ನಿಕಾಯದ ದೃಶ್ಯ ಕಲಾವಿಭಾಗದಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

## ಪ್ರೊ।। ವ್ಹಿಜಿ. ಅಂದಾನಿ

ಭೌಗೋಳಿಕವಾಗಿ 'ಹೈದರಾಬಾದ ಕರ್ನಾಟಕವು' ಕರ್ನಾಟಕದ ಉತ್ತರದ ತುದಿಯಲ್ಲಿರುವ ಪ್ರದೇಶ. ಕಪ್ಪುಮಣ್ಣಿನ ಕಲಬುರ್ಗಿ ಈ ಪ್ರದೇಶದ ಪ್ರಮುಖ ಜಿಲ್ಲೆಯಾಗಿದೆ. ಎಲ್ಲ ಪ್ರದೇಶಗಳಿಗೂ ಇರುವಂತೆ ಈ ಪ್ರದೇಶಕ್ಕೂ ತನ್ನದೇ ಆದ ಅಂದ-ಛಂದವಿದೆ. ಉಪಮೆಯೊಂದನ್ನು ಬಳಸಿ ಹೇಳುವುದಾದರೆ ಕಲಬುರ್ಗಿಯ ಸುತ್ತಣ ಸೃಷ್ಟಿ ನಿರಾಭರಣೆಯಾದ ಕಪ್ಪುಸುಂದರಿಯಂತೆ ಕಂಗೊಳಿಸುತ್ತದೆ. ಸಹಸ್ರಾರು ವರ್ಷಗಳಿಂದ ಈ ಪ್ರದೇಶ ಬಿಸಿಲಿಗೆ ಮೈಯೊಡ್ಡಿ ಮಲಗಿದ್ದರಿಂದಾಗಿ ಈ ಬಗೆಯ ಸೌಂದರ್ಯಸಿರಿ ಇದಕ್ಕೆ ಪ್ರಾಪ್ತವಾಗಿರಬೇಕು.

ಆದಿಕಾಲದಿಂದಲೂ ಇಲ್ಲಿನ ಕಪ್ಪುಮಣ್ಣು ಸಂಪತ್ತನ್ನು ಹೆರುವ ಜೀವಶಕ್ತಿಯಾಗಿದೆ. ಕಾಲಕಾಲಕ್ಕೆ ಕಲಾವಿದರು[೧], ಕವಿಗಳು, ಶರಣರು, ಸಂತರುಗಳಿಗೆ ಜನ್ಮ ನೀಡಿದ್ದರಿಂದಾಗಿ ಇದರೊಡಲು ಸಾರ್ಥಕಗೊಂಡಿದೆ. ಶ್ರಮ ಸಂಸತಿಯನ್ನೇ ಬಿತ್ತಿ ಬೆಳೆವ ಪರಂಪರೆಯ ಇಲ್ಲಿನ ಪ್ರತಿಭಾವಂತರು ತಂತಮ್ಮ ಕ್ಷೇತ್ರಗಳಲ್ಲಿ ಸಾಧನೆ ಮಾಡಿ ಎತ್ತರಕ್ಕೆ ಬೆಳೆದಿದ್ದಾರೆ. ವರ್ಣಿಸಿ ಹೇಳುವುದಾದರೆ 'ಮರಗಳಿಗೆ ಬರಗಾಲವಿರುವ ಈ ನಾಡಿನ ನೆಲಕ್ಕೆ ನೆರಳಾಗಿದ್ದಾರೆ ಈ ಸಾಧಕರು'.

ಮನುಷ್ಯ ಜೀವನದ ಮಹೋನ್ನತಿಗೆ ಬೇಕಾದ ಹಲವು ಭೌತಿಕ ಅಗತ್ಯಗಳ ಕೊರತೆಯನ್ನು ಈ ಪ್ರದೇಶ ಬಹುಕಾಲದಿಂದ ಎದುರಿಸುತ್ತಾ ಬಂದಿದೆಯಾದರೂ ಪ್ರತಿಭೆಗೆ ಕೊರತೆಯೆಂಬುದಿಲ್ಲ.

*ಚದುರರ್ ನಿಜದಿಂ ಕುರಿತೋ ದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್* ಓದದೆಯೂ (ಬರೆಯದೆಯೂ) ಕಾವ್ಯ(ಕಲೆ)ಗಳನ್ನು ಸೃಷ್ಟಿಸುವ ಸಹಜಪ್ರತಿಭಾಶಾಲಿಗಳು ಈ ನೆಲದವರು ಎಂದು ಹೇಳಿದ ಕವಿರಾಜಮಾರ್ಗಕಾರನೂ[೨] ಈ ನೆಲದವನೇ. ಬಿಸಿಲುಂಡ ಈ ನೆಲದ ಸಂಸ್ಕಾರ ಹೀಗೆ ಜನ್ಮಜನ್ಮಾಂತರಗಳದ್ದು. ಬಿಸಿಲು, ಬರಗಾಲಗಳೆಂಬ ಕುಲುಮೆಯಲ್ಲಿ ಇಲ್ಲಿನ ಪ್ರತಿಭೆ ಪುಟಕ್ಕಿಟ್ಟ ಚಿನ್ನದಂತೆ ಹೊಳಪನ್ನು ಪಡೆದು ಪ್ರಜ್ವಲಿಸಿದೆ. ಕಲಾವಿದ ಅಂದಾನಿ ಇಂಥದೊಂದು ಪ್ರಜ್ವಲಿಸುವ ಪ್ರತಿಭೆ.




---

೧. ಶಾಂತಲಿಂಗಪ್ಪ ಪಾಟೀಲ, ಶಂಕರರಾವ ಆಳಂದಕರ, ಚಂದ್ರಶೇಖರ, ಎಂ.ಟಿ. ಭೋಪಲೆ. ಎಸ್.ಎಂ. ಪಂಡಿತ ಮುಂತಾದವರು ಈ ಭಾಗದ ಹಿರಿಯ ಕಲಾವಿದರು.

೨. ಕನ್ನಡದ ಮೊದಲ ಲಾಕ್ಷಣಿಕ ಗ್ರಂಥ 'ಕವಿರಾಜಮಾರ್ಗ'. ಇದರ ಕರ್ತೃ ನೃಪತುಂಗ (ಶ್ರೀವಿಜಯ) ಮಳಖೇಡದವನು.

## ಮೂಲ ಸೆಲೆ

ಅಂದಾನಿಯವರ ಪೂರ್ಣ ಹೆಸರು ವೀರಣ್ಣ ಗುರಪ್ಪ ಅಂದಾನಿ. ತಾಯಿ ನೀಲಗಂಗಮ್ಮ. ಹನ್ನೊಂದು ಜನ ಸಹೋದರರಲ್ಲಿ ವೀರಣ್ಣ ಕೊನೆಯವರು. ಒಬ್ಬಳು ಸಹೋದರಿ. ಶ್ರೀಮಂತ ಸುಸಂಸ್ಕೃತ ಕೃಷಿಕ ಮನೆತನ.

ಕಲಬುರ್ಗಿ ಜಿಲ್ಲೆಯ ಹೊನ್ನಕಿರಣಗಿ ಅಂದಾನಿಯವರು ಹುಟ್ಟಿದ ಊರು. ೧೯೪೭ ಅವರು ಹುಟ್ಟಿದ ವರ್ಷ. ಭಾರತವು ದಾಸ್ಯದಿಂದ ಮುಕ್ತಿ ಪಡೆದ ಸಂಭ್ರಮದ ಕಾಲ. ಈಗ ಭಾರತದ ಸ್ವಾತಂತ್ರ್ಯಕ್ಕೆ ಆಗಿರುವಷ್ಟೇ ವಯಸ್ಸು ಅಂದಾನಿಯವರಿಗೆ.

ಅಂದಾನಿಯವರು ತಾವು ಹುಟ್ಟಿದ ಊರಲ್ಲೇ ಬಾಲ್ಯ ಕಳೆದದ್ದು. ಅಕ್ಷರ ಕಲಿತದ್ದೂ ಅಲ್ಲಿಯೇ. ನಂತರ ಮೆಟ್ರಿಕ್ಯುಲೇಶನ್ ಓದಿದ್ದು ಕಲಬುರ್ಗಿಯಲ್ಲಿ. ಈ ಕಿರಿಯ ಮಗ ವೈದ್ಯನಾಗಬೇಕೆಂಬುದು ತಂದೆ ಗುರಪ್ಪ ಅವರ ಇಚ್ಛೆಯಾಗಿತ್ತು. ಅದಕ್ಕೆ ಸಹೋದರರಾದ ಭಗವಂತರಾಯ, ಭೀಮರಾಯ ಮತ್ತು ಶರಣಪ್ಪ ಅವರುಗಳ ಒತ್ತೂ ಬಿದ್ದಿತ್ತು. ಹಾಗಾಗಿ ಹತ್ತನೇ ವರ್ಷ ಪಾಸಾದ ಮೇಲೆ ಹುಬ್ಬಳ್ಳಿಯಲ್ಲಿ ಪಿ.ಸಿ. ಜಾಬಿನ್ ಕಾಲೇಜು ಸೇರಿದರು ವಿಜ್ಞಾನ ಕಲಿಯಲೆಂದು. ಅಲ್ಲಿಯೂ ಕಲೆ ಮತ್ತು ಕಲಾವಿದರೊಡನೆಯೇ ಇವರ ಒಡನಾಟ ಬೆಳೆಯಿತು. ವಿಜ್ಞಾನದ ವಿಷಯಗಳು ತಲೆಗೆ ಹೋಗಲೇ ಇಲ್ಲ. ಮತ್ತೆ ಕಲಬುರ್ಗಿಗೆ ಮರಳಿದರು. ಕಲಾವಿದ ಪ್ರೊ। ಜಿ.ಎಸ್. ಖಂಡೇರಾವ್ ಅವರು ಆಗತಾನೇ ಆರಂಭಿಸಿದ (೧೯೬೫) 'ದಿ ಐಡಿಯಲ್ ಫೈನ್ ಆರ್ಟ್ಸ್' ಸಂಸ್ಥೆಗೆ ಮೊದಲ ತಂಡದ ವಿದ್ಯಾರ್ಥಿಯಾಗಿ ಸೇರಿ ಐದು ವರ್ಷದ ಪೇಂಟಿಂಗ್ ಡಿಪ್ಲೊಮಾವನ್ನು ಪ್ರಥಮ ರ್‍ಯಾಂಕ್‌ನೊಂದಿಗೆ ಪಡೆದರು. ಜೊತೆಗೆ ಶ್ರೀಶರಣಬಸವೇಶ್ವರ ಮಹಾವಿದ್ಯಾಲಯದಿಂದ ಬಿ.ಎ. ಪದವಿಯನ್ನು (೧೯೭೨) ಹೊಂದಿದರು.

ಅಂದಾನಿಯವರು ಪಡೆದ ಔಪಚಾರಿಕ ಶಿಕ್ಷಣ ಇಷ್ಟು ಮಾತ್ರವೇ. ಆದರೆ ಅವರ ಕಲೆಯ ಮೂಲ ಸೆಲೆ ಆರಂಭವಾದುದೇ ಹುಟ್ಟೂರಿನಿಂದ. ಮನೆಯ ಪರಿಸರ ಮತ್ತು ಹಳ್ಳಿಯ ವಾತಾವರಣ ಅಂದಾನಿಯವರು ಕಲಾವಿದರಾಗಿ ರೂಪುಗೊಳ್ಳುವಲ್ಲಿ ಮಹತ್ವದ ಪಾತ್ರವಹಿಸಿದವು. ಬಾಲ್ಯದ ಆ ದಿನಗಳಲ್ಲಿನ ಗೆಳೆಯರೊಂದಿಗಿನ ಆಟ, ನೋಟ, ಸಾಹಸ ಪ್ರದರ್ಶನ ಈ ಎಲ್ಲವುಗಳಿಂದ ಪಡೆದ ಅನುಭವಗಳು ಬಾಲಕ ವೀರಣ್ಣನ ಮನಸ್ಸಿನ ಮೇಲೆ ಗಾಢವಾದ ಪರಿಣಾಮ ಬೀರಿದವು. ತಾಯಿ ನೀಲಗಂಗಮ್ಮ ಹೊಲಿಯುತ್ತಿದ್ದ ಕೌದಿಯ ಮೇಲಿನ ಬಣ್ಣದ ಚಿತ್ತಾರಗಳು, ಕಾರುಹುಣ್ಣಿಮೆ, ಗೌರಿ ಮತ್ತು ಶೀಗಿಹುಣ್ಣಿಮೆಗಳಲ್ಲಿ ಮಾಡುತ್ತಿದ್ದ ಜನಪದ ಅಲಂಕಾರಗಳು ಇತ್ಯಾದಿಗಳ ಆಕರ್ಷಕ ನೆನಪು, ಪ್ರಭಾವಗಳು ಹರಳುಗೊಂಡು ಅವರ ಸೃಷ್ಟಿಗಳಲ್ಲಿ ಇಂದಿನವರೆಗೂ ದಾಖಲೆಗೊಳ್ಳುತ್ತಲೇ ಬಂದಿವೆ.

ಪರಿಸರ / Surroundings





ಅಂದಾನಿಯವರ ತಂದೆ ಕೃಷಿಕರು. ಅವರೂ ಕಲೆಯಲ್ಲಿ ಅಭಿರುಚಿಯುಳ್ಳವರಾಗಿದ್ದರು. ಅವರು ಮನೆ ಹಾಗೂ ದನಗಳ ಕೊಟ್ಟಿಗೆಯ ಗೋಡೆಗಳ ಮೇಲೆ ಚಿತ್ರಗಳನ್ನು ರೇಖಿಸುತ್ತಿದ್ದರು. ಬಾಲಕ ವೀರಣ್ಣನ ಮನಸ್ಸಿನ ಮೇಲೆ ಅದು ಅಚ್ಚಳಿಯದ ಪ್ರಭಾವ ಬೀರಿತು. ಹದಿಮೂರು ವರ್ಷದ ಎಳೆ ವಯಸ್ಸಿನಲ್ಲಿ ತಂದೆ ಅಗಲಿ ಹೋದರು. ಆದರೆ ಅವರು ಹಚ್ಚಿದ ಗೀಳು ಮಾತ್ರ ಇವನನ್ನು ಬಿಟ್ಟು ಹೋಗಲಿಲ್ಲ. ಮುಗ್ಧ ಮನಸ್ಸು ಗೋಡೆ, ನೆಲ, ಪಾಠಿಗಳ ಮೇಲೆ ಗೀಚಿತು. ಅಗಲಿದ ತಂದೆಯ ಕಾಡುವ ನೆನಪುಗಳಲ್ಲೇ ವೀರಣ್ಣನ ಕಲೆ ಅರಳಿತು.

## ತಲ್ಲೀನತೆ

ಮಗುವಾದಾಗ ಯಾವ ವಿಷಯದಲ್ಲಿ ತೀವ್ರತರವಾದ ತಲ್ಲೀನತೆ (ಇನ್‌ವಾಲ್ವ್‌ಮೆಂಟ್) ಹೊಂದಿರುತ್ತಾನೋ ಅದೇ ವಿಷಯದಲ್ಲಿ ಆತ ತನ್ನ ಮುಂದಿನ ಬದುಕಿನಲ್ಲಿ ಅದ್ವಿತೀಯವಾದ ಸಾಧನೆ ಮಾಡುತ್ತಾನಂತೆ. ಈ ಮಾತು ವೀರಣ್ಣನ ಬದುಕಿನಲ್ಲಿ ನೂರಕ್ಕೆ ನೂರರಷ್ಟು ಸತ್ಯವಾಗಿದೆ. ತನ್ನ ಮನೆಯ ಎದುರಿಗಿದ್ದ ಕುಂಬಾರರ ಮನೆಯಲ್ಲಿ ತಿಗರಿಯ ಮೇಲೆ ಕೆಸರು ತಿರುಗುತ್ತಲೇ ಸುಂದರ ಆಕಾರ ಪಡೆಯುತ್ತಿರುವ ಪರಿಯನ್ನು ನೋಡುತ್ತ ತಲ್ಲೀನನಾಗಿರುತ್ತಿದ್ದನು. ದೀಪಾವಳಿ ಹಬ್ಬ ಬಂತೆಂದರೆ ಅಂಗಡಿಗಳಲ್ಲಿ ಲಕ್ಷ್ಮಿಯ ಚಿತ್ರಗಳನ್ನು, ಹೂ ಗಿಡಗಳನ್ನು, ಪಕ್ಷಿಗಳನ್ನು ಚಿತ್ರಿಸುವಲ್ಲಿ ಜನರ ಮಧ್ಯೆಯೂ ತಲ್ಲೀನನಾಗಿರುತ್ತಿದ್ದುದು, ಅಲ್ಲದೆ ಗೋಲಿ ಆಟಕ್ಕೆಂದು ಗಾಜಿನಗೋಲಿಗಳಿಲ್ಲದ ಆ ಕಾಲದಲ್ಲಿ ಕಲ್ಲಿನ ಗೋಲಿಗಳನ್ನು ಕಟೆದು ದುಂಡಗಾಗಿಸಿ ಕೊಳ್ಳುವಲ್ಲಿಯೂ ತಲ್ಲೀನ ನಾಗಿರುತ್ತಿದ್ದುದುಂಟು. ಹೀಗೆ ಬಾಲ್ಯದ ಆ ಮನಸ್ಸು ಪಡೆದುಕೊಂಡ ತಲ್ಲೀನತೆ ಮುಂದೆ ಒಬ್ಬ ಕಲಾವಿದನಾಗಿ ಬೆಳೆಯಲು ಕಾರಣವಾಯಿತಲ್ಲದೇ ಒಂದು ನಾಡನ್ನೇ ಸಾಂಸ್ಕೃತಿಕವಾಗಿ ಕಟ್ಟುವಲ್ಲಿ[೩] ತಲ್ಲೀನತೆ ಪಡೆದುಕೊಂಡಿತು.



ಪರಿಸರ / Surroundings

## ಬಿಸಿಲುಂಡ ಬಂಡೆಗಳು

ಹೊನ್ನಕಿರಣಗಿಯ ಮೂಲ ಹೆಸರು ಕಿರಣಗಿ ಎಂದಷ್ಟೆ. ೧೯೬೩-೬೪ರಲ್ಲಿ ವೀರೇಂದ್ರ ಪಾಟೀಲರು ಲೋಕೋಪಯೋಗಿ ಮಂತ್ರಿಯಾಗಿದ್ದರು[೪]. ಅದೇ ವೇಳೆ ಭಾರತ-ಚೀನಾ ಯುದ್ಧ. ತುರ್ತು ಪರಿಸ್ಥಿತಿ ಘೋಷಿಸಲಾಗಿತ್ತು. ತನ್ನಿಮಿತ್ತ ನಿಧಿಸಂಗ್ರಹದಲ್ಲಿ ತೊಡಗಿದ್ದ ಮಂತ್ರಿಗಳಿಗೆ ಕಿರಣಗಿಯ ಜನತೆ ೧೦೧ ತೊಲೆ ಚಿನ್ನ ಸಂಗ್ರಹಿಸಿ ನೀಡಿದರು. ಆಗ ಅವರು ಈ ಊರಿಗೆ 'ಹೊನ್ನ ಕಿರಣಗಿ' ಎಂದು ವಿಶೇಷಣ ಬಳಸಿ ಕರೆದರು. ಕಿರಣಗಿ ಹೊನ್ನ ಕಿರಣಗಿಯಾದದ್ದು ಹೀಗೆ. ಇಂತಹ ಸಮೃದ್ಧ ಗ್ರಾಮ ಪರಿಸರದ ಹಿನ್ನಲೆ ಕಲಾವಿದ ಅಂದಾನಿಯವರದು.

ಸುತ್ತಲೂ ಫಲವತ್ತಾದ ಕಪ್ಪು ನೆಲವಿರುವ ಕಿರಣಗಿ ಒಂದು ಸುಂದರ ಹಳ್ಳಿ. ಬಿಸಿಲನ್ನು ಉಂಡು ಮಲಗಿದಂತಿರುವ ಹಾಸುಗಲ್ಲಿನ ರಸ್ತೆಗಳು, ಪೇರಿಸಿಟ್ಟ ಬಂಡೆಗಲ್ಲಿನ ಗೋಡೆ, ಮನೆ ಚಪ್ಪರಗಳು ಎಲ್ಲ ಕಲ್ಲುಮಯ. ಮಧ್ಯೆ ಕಳೆಕಟ್ಟಿದ ಕಲಾತ್ಮಕ ಕೆತ್ತನೆಯ ಕುದುರೆ ಬಾಗಿಲು, ಕಿಟಕಿಗಳು, 'ಹೊನ್ನ ಕಟ್ಟುವರು ಉಡಿಯೊಳಗೆ' ಎಂಬ ಜನಪದ ಉಕ್ತಿಯಂತೆ ಸಿರಿ, ಸಮೃದ್ಧಿ. ಬರಗಾಲದ ಪ್ರದೇಶದಲ್ಲಿದ್ದೂ ಬರಗಾಲವೆಂಬುದೇ ಗೊತ್ತಿಲ್ಲದ ಈ ಊರಿನಲ್ಲಿ ಮಳೆಯೂ ಸಮೃದ್ಧ, ಬೆಳೆಯೂ ಸಮೃದ್ಧ. ಅಂತೆಯೇ ಇಲ್ಲಿನ ಎಲ್ಲವೂ ಸಶಕ್ತ. ಬಾಲ್ಯದಿಂದ ಇಂದಿನವರೆಗೂ ಈ ಊರಿನ ದನಕರುಗಳ ಖುರಪುಟಗಳ ನಾದ, ಜನರಿಂದ ಹಸುಕಂದಮ್ಮಗಳಿಂದ ತುಂಬಿ ತುಳುಕುವ ಮನೆಗಳು; ಹಬ್ಬ-ಹರಿದಿನಗಳಂದು ಹೊರಡಿಸುವ ದೇವರ ಉತ್ಸವ ಜಾತ್ರೆಗಳು, ಜನಪದ ಪ್ರದರ್ಶನ ಕಲೆಗಳು ಅಲ್ಲದೆ ಜೋಳ, ತೊಗರಿ, ಹತ್ತಿಬೆಳೆಗಳ ಹಸಿರು ತುಂಬಿದ ಹೊಲಗದ್ದೆಗಳು, ಸುಗ್ಗಿಯ

---

೩. ವಿದ್ಯಾರ್ಥಿಯಾಗಿದ್ದಾಗ ಅಂಚೆಚೀಟಿ, ಪತ್ರಿಕೆಗಳಲ್ಲಿ ಬಂದ ಚಿತ್ರಗಳನ್ನು, ಕಲಾ ಪುಸ್ತಕಗಳನ್ನು ಸಂಗ್ರಹಿಸುವಲ್ಲಿ ತಲ್ಲೀನರಾಗಿರುತ್ತಿದ್ದರು. ಅದರ ಪ್ರತಿಫಲ ಈಗ ಅವರು ಕಟ್ಟಿದ ಗ್ರಂಥಾಲಯ.

೪. ವೀರೇಂದ್ರ ಪಾಟೀಲರು ಅನಂತರ ಕರ್ನಾಟಕದ ಮುಖ್ಯಮಂತ್ರಿಯೂ ಆಗಿದ್ದರು.

ಸಂದರ್ಭದಲ್ಲಿ ರಾತ್ರಿಯಿಡೀ ಹಾಡುಗಳನ್ನು ಹೇಳುತ್ತ ಹಂತೆ ಹೊಡೆದು ರಾಶಿಮಾಡುವುದು. ಹೀಗೆ ಎಲ್ಲವನ್ನು ಒಳಗೊಂಡ ಸಮೃದ್ಧ ದೃಶ್ಯಾನುಭವಗಳು ಬಗೆಬಗೆಯ ರೂಪಾಕಾರಗಳಾಗಿ ಅಷ್ಟೇ ಶಕ್ತಿಯುತವಾಗಿ ಅವರ ಕಲಾಕೃತಿಗಳಲ್ಲಿ ಮೈತಳೆದಿವೆ".

ಕಲಾವ್ಯಾಸಂಗ

ಅಂದಾನಿಯವರಲ್ಲಿ ತೀವ್ರತರವಾದ ಕಲಾಸಕ್ತಿ ಹಾಗೂ ಪ್ರಬಲವಾದ ದೃಶ್ಯ ಗ್ರಹಣಶಕ್ತಿಗಳೆರಡೂ ಮೇಳೈಸಿವೆ. ಪ್ರಾಥಮಿಕ ಶಾಲೆಯಲ್ಲಿದ್ದಾಗಲೇ ಬಾಲಕ ವೀರಣ್ಣ ಅಂದಾನಿ ಪಾಠಿಯ ಮೇಲೆ ರೇಖಾ ಚಿತ್ರಗಳನ್ನು ಬರೆದು ಆನಂದಪಡುತ್ತಿದ್ದ. ಸರಸ್ವತಿ ಪೂಜೆಯಲ್ಲಿ ಪ್ರತಿವರ್ಷ ಈತನ ಚಿತ್ರಕ್ಕೇ ಪ್ರಥಮ ಬಹುಮಾನ ದೊರಕುತ್ತಿತ್ತು. ಚಿತ್ರಬಿಡಿಸುವ ಈ ಗೀಳು ಮಾಧ್ಯಮಿಕ ಶಾಲೆಯಲ್ಲಿ ಇನ್ನಷ್ಟು ಪ್ರಬಲವಾಯ್ತು. ಕಲಬುರ್ಗಿಯ ಶ್ರೀ ಶರಣಬಸವೇಶ್ವರ ಪ್ರೌಢ ಶಾಲೆಯಲ್ಲಿ ಓದುತ್ತಿರುವಾಗ ಬಿಡುವಿನ ವೇಳೆಯಲ್ಲಿ ಓದುವ ಬದಲಾಗಿ ರಾಷ್ಟ್ರನಾಯಕರು, ಸಾಧಕರು, ಮಹಾಪುರುಷರ ಭಾವಚಿತ್ರಗಳನ್ನು ನೋಡಿ ಚಿತ್ರಿಸುವುದು, ನಾಣ್ಯ ಹಾಗೂ ಅಂಚೆ ಚೀಟಿಗಳನ್ನು ಸಂಗ್ರಹಿಸುವುದು ನಿತ್ಯದ ಹವ್ಯಾಸಗಳಾಗಿದ್ದವು. ಅಲ್ಲದೆ ಅಂದು ಅತ್ಯಂತ ಪ್ರಸಿದ್ಧಿಯಲ್ಲಿದ್ದ 'ಗುಬ್ಬಿವೀರಣ್ಣ' ನಾಟಕ ಕಂಪನಿಯಿಂದ ಪ್ರದರ್ಶನಗೊಳ್ಳುತ್ತಿದ್ದ ನಾಟಕಗಳನ್ನು ನೋಡುವುದು ಇವರ ಹವ್ಯಾಸಗಳಲ್ಲೊಂದಾಗಿತ್ತು. ದಶಾವತಾರ, ಸದಾರಮೆ, ರಕ್ತರಾತ್ರಿ ಮುಂತಾದ ಐತಿಹಾಸಿಕ, ಪೌರಾಣಿಕ, ಸಾಮಾಜಿಕ ವಸ್ತುಗಳನ್ನುಳ್ಳ ಅನೇಕ ನಾಟಕಗಳನ್ನು ನೋಡುತ್ತಿದ್ದನು. ಈತನಲ್ಲಿರುವ ಈ ಗೀಳನ್ನು ಚಿತ್ರಕಲಾ ಶಿಕ್ಷಕರಾಗಿದ್ದ ವಿ.ಎಸ್. ಬಂಕೂರಕರ ಗಮನಿಸಿದ್ದರು. ಇವರ ಪ್ರೋತ್ಸಾಹದಿಂದಲೇ ಡ್ರಾಯಿಂಗ್ ಗ್ರೇಡ್ ಪರೀಕ್ಷೆಗಳನ್ನು ಕಟ್ಟಿ ಉತ್ತೀರ್ಣನಾದನು. ಒಂಭತ್ತನೆಯ ತರಗತಿಯಲ್ಲಿದ್ದಾಗ 'ಇಲಸ್ಟ್ರೇಟೆಡ್ ವೀಕ್ಲಿ'ಯವರು ಏರ್ಪಡಿಸಿದ್ದ ರಾಷ್ಟ್ರಮಟ್ಟದ ಕಲಾಸ್ಪರ್ಧೆಯಲ್ಲಿ ಈತನ ಚಿತ್ರ ಪ್ರಥಮ ಬಹುಮಾನ ತಂದುಕೊಟ್ಟಿತು. ಆಗ ಹುಡುಗ ವೀರಣ್ಣನಿಗಾದ ಆನಂದ ಅಪರಿಮಿತ. ಈ ಬಹುಮಾನ ಚಿಗುರುತ್ತಿರುವ ಕಲಾಪ್ರತಿಭೆಗೆ ಮತ್ತಷ್ಟು ಕಳೆಕಟ್ಟಿತು. ಕಲಾಸಕ್ತಿ ದಟ್ಟವಾಗಿ ನೆಲೆಯೂರುವಂತೆ ಮಾಡಿತು. ವಿಜ್ಞಾನ ಓದುವುದನ್ನು ಬಿಟ್ಟುಕೊಟ್ಟು ಕಲಾವ್ಯಾಸಂಗಕ್ಕೆ ತೊಡಗಿದ ಮೇಲೆ ವೈದ್ಯರನ್ನಾಗಿಸಬೇಕೆಂಬ ಮನೆಯವರ ಆಸೆಗೆ ತಣ್ಣೀರೆರಚಿದಂತಾಗಿತ್ತು. ತೀವ್ರವಾದ ಕಲಾಸಕ್ತಿಯೇ ಮೇಲುಗೈ ಪಡೆದಿತ್ತು. ಹೀಗಾಗಿ ಸಿರಿಂಜ್ ಹಿಡಿದು ಔಷಧಿಯಲ್ಲಿ ಬೆರೆಯಬೇಕಾಗಿದ್ದ ಅಂದಾನಿಯವರು ಕುಂಚ ಹಿಡಿದು ಬಣ್ಣದಲ್ಲಿ ಬೆರೆತು ಹೋದರು.



ಹೀಗೆ ವೈದ್ಯನಾಗುವ ಆಸೆಯನ್ನು ಬಿಟ್ಟು ಕಲಾವಿದನಾಗಬೇಕೆಂಬ ಆಕಾಂಕ್ಷೆಯಿಂದ ಐಡಿಯಲ್ ಫೈನ್ ಆರ್ಟ್ಸ್ ಸಂಸ್ಥೆಯನ್ನು ಸೇರಿದರು. ಈ ಸಂಸ್ಥೆಯ ಕಲಾವಾತಾವರಣದಲ್ಲಿ ವೀರಣ್ಣನ ಕಲೆ ಚಿಗುರೊಡೆದು ಪಲ್ಲವಿಸಿತು. ಗುರುಗಳಾದ ಖಂಡೇರಾವ ಅವರ ಮಾರ್ಗದರ್ಶನದಲ್ಲಿ ನಿಸರ್ಗಚಿತ್ರ, ಭಾವಚಿತ್ರ, ಸಂಯೋಜನಾ ಚಿತ್ರ ಹಾಗೂ ಸ್ಥಿರ ಚಿತ್ರಣಗಳ ರಚನೆಯೊಂದಿಗೆ

೫. ಬಾಲಕನಾಗಿದ್ದಾಗ ವೀರಣ್ಣ ಒಮ್ಮೆ ಕಿರಣಗಿಯ ಹೊರವಲಯದಲ್ಲಿರುವ ದೇವಸ್ಥಾನದಲ್ಲಿನ ಮರಗಮ್ಮನ ಶಿಲ್ಪಗಳ ಮೇಲಿನ ಬೆಳ್ಳಿಯ ಆಭರಣಗಳ ಸೌಂದರ್ಯಕ್ಕೆ ಮಾರುಹೋಗಿ ಅವನ್ನೆಲ್ಲ ಎತ್ತಿಕೊಂಡು ಮನೆಗೆ ತಂದನಂತೆ. ಅವನ ತಾಯಿ ದೇವರು ಮೂಗು ಕೊಯ್ಯುತ್ತಾನೆ ಎಂದು ಹೆದರಿಸಿದಾಗ ಮತ್ತೆ ಅವುಗಳನ್ನು ಒಯ್ದು ಮೊದಲಿನಂತೆ ಆ ದೇವತಾ ಶಿಲ್ಪಗಳ ಮೈಮೇಲೆ ಹಾಕಿ ಬಂದನಂತೆ. ಈ ನೆನಪು ಅವರಲ್ಲಿ ಇಂದಿಗೂ ಹಸಿಯಾಗಿದೆ.

ಕಲಾಸಿದ್ಧಾಂತ, ಕಲಾ ಇತಿಹಾಸಗಳ ಕುರಿತ ವಿಚಾರ ಮಂಥನವೂ ಸೇರಿತ್ತು. ಮುಂಬೈನ ಜೆ.ಜೆ. ಕಲಾಶಾಲೆಯಲ್ಲಿ ಅಕಾಡೆಮಿಕ್ ಕಲಾಶಿಕ್ಷಣ (ಬ್ರಿಟೀಷ್ ವಿಕ್ಟೋರಿಯನ್ ಶೈಲಿ) ಪಡೆದು ಬಂದಿದ್ದ ಖಂಡೇರಾವರಿಂದ ಚಿತ್ರಕಲೆಯ ಮೂಲ ಪಾಠಗಳನ್ನು ಕಲಿತ ವೀರಣ್ಣನ ಆಸಕ್ತಿ ಡಿಪ್ಲೊಮೊ ಮುಗಿವ ಹೊತ್ತಿಗಾಗಲೇ ಅಕಾಡೆಮಿಕ್ ಶೈಲಿಯಿಂದ ಆಧುನಿಕ ಸೃಜನಶೀಲ ಶೈಲಿಯೆಡೆಗೆ ವಾಲಿತು. ಅಂದಿನಿಂದ ಇಂದಿನವರೆಗೂ ಇವರ ಸೃಷ್ಟಿಪ್ರಕ್ರಿಯೆ ಓತಪ್ರೋತವಾಗಿ ಪ್ರವಹಿಸುತ್ತಲೇ ಇದೆ.



ವಸುಂತ / Spring

### ಸಮಷ್ಟಿಗತ ಸಾಧನೆ

ಒಬ್ಬ ವ್ಯಕ್ತಿ ತಾನು ಗೈದ ಮಹತ್ತರ ಸಾಧನೆಯಿಂದಾಗಿ ಒಂದು ಚೈತನ್ಯ ಶಕ್ತಿಯಾಗಿ[೬] ಗುರುತಿಸಲ್ಪಡುತ್ತಾನೆ. ತೀವ್ರತರವಾದ ಆಸಕ್ತಿಯಿಂದ ತಾನು ಅಪ್ಪಿಕೊಂಡ ಕ್ಷೇತ್ರವೊಂದರಲ್ಲಿ ವ್ಯಕ್ತಿಗತ ಮತ್ತು ಸಮಷ್ಟಿಗತವಾದ ಇಬ್ಬದಿಯ ಸಾಧನೆ ಕಷ್ಟಸಾಧ್ಯ. ಅಂದಾನಿಯವರು ಈ ಎರಡೂ ನೆಲೆಗಳಲ್ಲಿ ಸಾಧನೆ ಮಾಡಿದವರು. ಅವರ ಈ ಸಾಧನೆ ಅದ್ವಿತೀಯ, ಅಮೋಘ ಎಂದು ಹೇಳಿದರೆ ಉತ್ಪ್ರೇಕ್ಷೆಯಲ್ಲ. ವ್ಯಕ್ತಿಗತವಾಗಿ ಅವರು ರಾಷ್ಟ್ರಮಟ್ಟದ ಒಬ್ಬ ಶ್ರೇಷ್ಠ ಕಲಾವಿದರಾಗಿ ಬೆಳೆದಿದ್ದಾರೆ. ಕಡಲಾಚೆಗಿನ ರಷ್ಯಾ, ಇಂಗ್ಲೆಂಡ್ ಮುಂತಾದ ದೇಶಗಳನ್ನು ಸುತ್ತಾಡಿ ಕಲಾಲೋಕದಲ್ಲಿನ ತಮ್ಮ ಅರಿವನ್ನು ವಿಸ್ತರಿಸಿಕೊಂಡಿದ್ದಾರೆ. ಜಗದ್ ವಿಖ್ಯಾತರಾದ ಕಲಾವಿದರನೇಕರನ್ನು ಪ್ರತ್ಯಕ್ಷ ಕಂಡಿದ್ದಾರೆ. ಅವರ ಕಲಾಕೃತಿಗಳನ್ನು ಗ್ರಹಿಸಿದ್ದಾರೆ. ಈ ನಿಟ್ಟಿನಲ್ಲಿಯೇ ತಮ್ಮ ಸಂಸ್ಥೆಯನ್ನು, ತನ್ಮೂಲಕ ವಿದ್ಯಾರ್ಥಿಗಳನ್ನು ರಾಷ್ಟ್ರ-ಅಂತರಾಷ್ಟ್ರೀಯ[೭] ಮಟ್ಟದಲ್ಲಿ ಬೆಳೆಸಿದ್ದಾರೆ. ಸಾಮೂಹಿಕ ಮತ್ತು ಸಾಂಸ್ಥಿಕವಾದ ಅವರ ಈ ಸಾಧನೆ ಸಮಷ್ಟಿಗತವಾದುದು[೮]. ಅರ್ಥಾಥ್ ಸಾಹಿತಿ ಮ.ಗು. ಬಿರಾದಾರ ಹೇಳುವಂತೆ 'ಅಂದಾನಿಯವರು ಮರವಾಗಿ ಬೆಳೆಯುವುದರೊಂದಿಗೆ ಬನವಾಗಿ ಬೆಳೆದರು'. ಪಾಟೀಲ ಪುಟ್ಟಪ್ಪ ಹೇಳುವಂತೆ 'ತಾವು ಮಾತ್ರ ಬೆಳೆಯದೆ ತಮ್ಮ ಕಣ್ಣರಿಕೆಯಲ್ಲಿ ಹಿಡಿದವರನ್ನು ಬೆಳೆಸಿದ್ದಾರೆ'[೯]. ಧಾರವಾಡದಲ್ಲಿ ಕಣ್ಣುಮುಚ್ಚಿ ಕಲ್ಲು ಒಗೆದರೆ ಅದು ಒಬ್ಬ ಕವಿಗೆ ಬಡಿಯುತ್ತದೆಯೆಂದು ಹೇಳುತ್ತಾರೆ. ಕಲಬುರ್ಗಿಯಲ್ಲಿ ಅದು ಒಬ್ಬ ಕಲಾವಿದನಿಗೆ ಬಡಿಯುತ್ತದೆ' ಎಂಬ ಮಾತಿಗೆ ನಿದರ್ಶನವೆಂಬಂತೆ ಕಲಾವಿದರ ತಾಣವಾಗಿ ಇಂದು ಕಲಬುರ್ಗಿ ಪರಿವರ್ತಿತವಾಗಿರುವುದರ ಹಿಂದೆ ಅಂದಾನಿ ಎಂಬ ಶಕ್ತಿ ಅಡಗಿದೆ.

---

೬. ಕಲಬುರ್ಗಿಯಲ್ಲಿ ಏರ್ಪಡಿಸಿದ್ದ ಎರಡು ಅಂತರಾಷ್ಟ್ರೀಯ ಮಟ್ಟದ ಕಲಾಶಿಬಿರಗಳು ಹಾಗೂ ಬೆಂಗಳೂರಿನಲ್ಲಿ ಜರುಗಿದ ರಾಷ್ಟ್ರೀಯ ಕಲಾಮೇಳದ ರೂವಾರಿಯಾಗಿ ಕೆಲಸ ನಿರ್ವಹಿಸಿದ್ದು, ರಾಜ್ಯ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ ದುಡಿದದ್ದು ನೋಡಿದರೆ ಅವರೊಬ್ಬ ವ್ಯಕ್ತಿಯಲ್ಲ ಒಂದು ಶಕ್ತಿಯಾಗಿ ಕಾಣುತ್ತಾರೆ.

೭. ಅಂದಾನಿಯವರ ಅನೇಕ ವಿದ್ಯಾರ್ಥಿಗಳು ರಾಜ್ಯ ಹಾಗೂ ಕೇಂದ್ರ ಲಲಿತಕಲಾ ಅಕಾಡೆಮಿಯ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಅವರಲ್ಲಿ ಶ್ರೀ ಶೇಷರಾವ ಬಿರಾದಾರ, ಶೇಖ್ ಆಯಾಜುದ್ದೀನ ಮತ್ತು ಶರಣ ದೇಸಾಯಿ ಇವರೆಲ್ಲ ಹೊರ ದೇಶದಲ್ಲಿ ನೆಲೆಸಿದ್ದಾರೆ.

೮. ಗುಲಬರ್ಗಾಕ್ಕೆ ಬಂದಿದ್ದ ಪಿ. ಲಂಕೇಶರು 'ದಿ ಐಡಿಯಲ್ ಫೈನ್ ಆರ್ಟ್ಸ್ ಸಂಸ್ಥೆ'ಯ ಆಗಿನ ಅಧ್ಯಕ್ಷ ವಿದ್ಯಾಚಂದ್ರ ಕೊಠಾರಿಯವರನ್ನು ಕುರಿತು 'ಅಂದಾನಿಯನ್ನು ಎಲ್ಲಿ ಗುರುತಿಸಿದಿರಿ' ಎಂದು ಕೇಳಿದರಂತೆ. ಅದಕ್ಕೆ ಅವರು 'ನಾನು ಗುಲಗಂಜಿಗಳ ತೂಕ ಮಾಡಬಲ್ಲವನು, ಹಾಗೆ ಈತನನ್ನು ತೂಕಮಾಡಿ ಪತ್ತೆ ಹಚ್ಚಿದೆ' ಎಂದರಂತೆ.

೯. 'ಸಂಸ್ಥೆ ಮತ್ತು ವಿದ್ಯಾರ್ಥಿಗಳನ್ನು ಬೆಳೆಸುವ ನಿಟ್ಟಿನಲ್ಲಿ ನಾನು ತೆಗೆದುಕೊಂಡ ತೊಂದರೆ ಮತ್ತು ಅದು ತಂದುಕೊಟ್ಟ ಸುಖ ಎರಡೂ ಅನಿರ್ವಚನೀಯ. ನಿಜವಾದ ಸುಖ ಕಷ್ಟದಿಂದಲೇ ಬರುತ್ತದೆ. ಈ ಸುಖಕ್ಕಾಗಿ ನನ್ನ ಕೆಲವು ವಿದ್ಯಾರ್ಥಿಗಳಿಗೆ ಋಣಿಯಾಗಿದ್ದೇನೆ' ಎಂದಿದ್ದಾರೆ ಅಂದಾನಿ, ಒಂದು ಸಂದರ್ಶನದಲ್ಲಿ.



ಕಲಾನಿಕೇತನದಿಂದ ೧೯೬೯ರಲ್ಲಿ ಡಿಪ್ಲೊಮಾ ಪಾಸಾದ ಮೇಲೆ ಅಂದಾನಿಯವರು ಗ್ರಿನೋಬಲ್ಸ್ ಪ್ರೆಸ್‌ನಲ್ಲಿ ಕೆಲಸಕ್ಕೆ ಸೇರಿದ್ದರು. ಸರಕಾರಿ ನೌಕರಿಗೆ ಕರೆ ಬಂದರೂ ಕಲಬುರ್ಗಿಯನ್ನು ಬಿಟ್ಟು ಕದಲಲೊಲ್ಲದ ಇವರು ಕಲಾವಿದನಾಗಿ ಬೆಳೆವ ಕನಸು ಕಂಡಿದ್ದರು. ಮುದ್ರಣಾಲಯದ ನಿರ್ಜೀವ ಯಂತ್ರದಲ್ಲಿ ಹೊಂದಿಸಿಟ್ಟ ಮೊಳೆಗಳ ಮೈಗೆ ಬಿಳಿಯ ಕಾಗದ ತನ್ನ ಮೈಯ್ಯೊತ್ತಿ ಹೊರಬಂದಾಗ ಅಂದಾನಿಯವರಿಗೆ ಅದರಲ್ಲಿ ಕಂಡದ್ದು ಅಕ್ಷರಗಳಲ್ಲ, ಅಮೂರ್ತ ಸಂಯೋಜನೆಗಳು; ಈ ದೃಶ್ಯಸಂಯೋಜನೆಗಳು ಇವರ ಕನಸಿನ ಕಲಾಕೃತಿಗಳಿಗೆ ಉಪಮೆಗಳೋಪಾದಿಯಲ್ಲಿ ಹರಿದು ಬಂದು ಸುಪ್ತ ಮನಸ್ಸಿಗೆ ದಾಳಿ ಇಡುತ್ತಿದ್ದವು. ಈ ಹಂತದಲ್ಲೇ 'ತಾನಾಯ್ತು ತನ್ನ ಕಲೆಯಾಯ್ತು' ಹೀಗೆ ಅಂದಾನಿ 'ಒಂಟಿಸಲಗ'ವಾಗಿ ಬಿಡುತ್ತಿದ್ದರೇನೋ! ಸಂದರ್ಭ ಹಾಗಾಗಲು ಬಿಡಲಿಲ್ಲ. ಅಗತ್ಯಕ್ಕಿಂತಲೂ ಮಹತ್ತರವಾದ ಸಾಧನೆ ಮಾಡಬೇಕಾದ ಗುರುತರ ಜವಾಬ್ದಾರಿ ಹೆಗಲೇರಿತು. ದಿ ಐಡಿಯಲ್ ಫೈನ್ ಆರ್ಟ್ಸ್ ಸಂಸ್ಥೆಯನ್ನು ಆರಂಭಿಸಿ ಅದರ ಚುಕ್ಕಾಣಿ ಹಿಡಿದಿದ್ದ ಪ್ರೊ। ಖಂಡೇರಾವ್ ಅವರು ಅನುದಾನ ಸಿಗದೇ ಅನಾನುಕೂಲತೆಯಿಂದ ಹತಾಶರಾಗಿದ್ದರು. ಹಾಗಾಗಿ ಉತ್ಸಾಹಿ ಯುವಕನಾಗಿದ್ದ ಅಂದಾನಿ ವೀರಣ್ಣನ ಮೇಲೆ ಭರವಸೆಯಿಟ್ಟು ಸಂಸ್ಥೆಯ ಸಂಪೂರ್ಣ ಜವಾಬ್ದಾರಿಯನ್ನು (೧೯೭೨) ಹೊರಿಸಿದರು. ಏನೂ ಅನುಭವ ಇಲ್ಲದ ಹುಡುಗನಾಗಿದ್ದ ಅಂದಾನಿಗೆ[೧೦] ಅಂದಿನಿಂದ ಸಂಸ್ಥೆಯನ್ನು ಬೆಳೆಸುವುದೊಂದೇ ಚಿಂತೆ. ಈ ದಾರಿಯಲ್ಲಿ ಕಲ್ಲುಮುಳ್ಳುಗಳನ್ನು ತುಳಿದರು[೧೧]. ಹಳ್ಳಕೊಳ್ಳಗಳನ್ನು ಈಜಿದರು. ಕೊನೆಗೆ ಹೂಗಳನ್ನು ಪಡೆದರು. ಅದರ ಫಲವಾಗಿ ಇಂದು ಕಲಬುರ್ಗಿ ಪ್ರದೇಶವೇ ಕಲಾಕುಸುಮಗಳ ಬನವಾಗಿ ಬೆಳೆದಿದೆ. ಅದರ ಕಂಪು ರಾಷ್ಟ್ರದೆಲ್ಲೆಡೆಯಲ್ಲಿ ಹರಡಿದೆ. ಹೀಗೆ ಅಂದಾನಿಯವರು ಕಲಾವಿದರಾಗಿ, ಕಲಾ ಶಿಕ್ಷಕರಾಗಿ, ಕವಿಹೃದಯಿಗಳಾಗಿ ಬೆಳೆಯುವುದರೊಂದಿಗೆ ಕಲಾವಿದರನ್ನು ತನ್ಮೂಲಕ ಸಂಸ್ಥೆಯನ್ನು ಬೆಳೆಸಿದ ಕೀರ್ತಿ ಈಗ ಅಂತರಾಷ್ಟ್ರೀಯ ಮಟ್ಟದಲ್ಲಿ ಚರ್ಚಿಸುವಂತಾಗಿದೆ.

ವಿ.ಜಿ. ಅಂದಾನಿಯವರ ಬಹುಮುಖದ ಸಾಧನೆಯನ್ನು ಸಂಗ್ರಹಿಸಿ, ದ್ವಿಮುಖಗೊಳಿಸಿ ಹೇಳುವುದಾದರೆ ಅವರ ಕಲಾಯಾತ್ರೆಯಲ್ಲಿ ಎರಡು ಮುಖ್ಯ ಸ್ಥಾಯಿಗಳು ಪರಸ್ಪರ ಸಂಘರ್ಷಕ್ಕಿಳಿಯದೇ ಒಂದನ್ನೊಂದು ಅನುಸರಿಸಿಕೊಂಡು ಬಂದದ್ದು ಗೋಚರಿಸುತ್ತದೆ. ವೈಯಕ್ತಿಕವಾಗಿ ತಾವೊಬ್ಬ ಶ್ರೇಷ್ಠ ಕಲಾವಿದನಾಗಿ ಕಲಾಪ್ರಪಂಚದಲ್ಲಿ ಗುರುತಿಸಿ ಕೊಳ್ಳಬೇಕೆಂಬುದು ಒಂದಾದರೆ ಆಕಸ್ಮಿಕವಾಗಿ ಹೆಗಲ ಮೇಲೇರಿದ ಕಲಾಸಂಸ್ಥೆಯನ್ನು ಉಳಿಸಿ ಬೆಳೆಸಬೇಕೆಂಬುದು ಮತ್ತೊಂದಾಗಿದೆ. ಈ ಎರಡು ಮುಖ್ಯ ಸ್ಥಾಯಿಗಳಿಗೆ ಅವರು ತಮ್ಮ ಇತರೆಲ್ಲ ಚಟುವಟಿಕೆಗಳನ್ನು ವಿಭಾವಗಳಂತೆ ಕಂಡು ತಮ್ಮ ಬೆಳವಣಿಗೆಗೆ ಪೂರಕವಾಗಿ ದುಡಿಸಿಕೊಂಡಿದ್ದಾರೆ.

---

೧೦. 'ಮೊದಲಿನಿಂದಲೂ ಕಠಿಣಕೆಲಸ ಮಾಡುವ ಪ್ರವೃತ್ತಿ ನನ್ನದು. ಒಂದು ಕುಣಿ (ಸ್ಮಶಾನ) ತೋಡಲು ಹಚ್ಚಿದರೂ ನಾನದನ್ನು ಅಷ್ಟೇ ಶ್ರದ್ಧೆಯಿಂದ ಮಾಡುತ್ತೇನೆ' ಎನ್ನುವ ಅಂದಾನಿ ತಮ್ಮ ಆತ್ಮವಿಶ್ವಾಸದ ಬಗ್ಗೆ ಬೀಗುತ್ತಾರೆ; ಸಂದರ್ಶನದಲ್ಲಿ.

೧೧. ಅಪಖ್ಯಾತಿಗೂ ಒಳಗಾದದ್ದುಂಟು.

## ಕಲಾಸೃಷ್ಟಿ



ಕ್ರಿಯಾಶೀಲರಾಗಿರುವ ಅಂದಾನಿಯವರು ಪ್ರಯೋಗಶೀಲರೂ ಕೂಡ. ಅವರ ಅಭಿವ್ಯಕ್ತಿ ತೀವ್ರತೆ ಹಲವು ಬಗೆಯದು. ಚಿತ್ರಗಳ ವಸ್ತುವೇ ಆಗಲಿ, ರಚನೆಗೆ ಬಳಸುವ ಮಾಧ್ಯಮವೇ ಆಗಲಿ ಅಲ್ಲಿ ಹೊಸತನವೇ ಅವರ ವಿಶೇಷತೆ. ಇದ್ದಿಲು, ಇಂಕ್, ಪೇಸ್ಟಲ್ ಮೊದಲ್ಗೊಂಡು ಜಲವರ್ಣ, ತೈಲವರ್ಣ, ಪೋಸ್ಟರ್ ವರ್ಣ, ಅಕ್ರೆಲಿಕ್ ವರ್ಣ ಯಾವುದಾದರೂ ಸರಿ ಕಲಾಸೃಷ್ಟಿಗೆ ದುಡಿಸಿಕೊಳ್ಳುವ ಅಗಾಧ ಪ್ರತಿಭೆ, ಕುಶಲತೆ ಮತ್ತು ಚಾಕಚಕ್ಯತೆ ಅವರದು. ಚಿತ್ರಿಸಲು ವಸ್ತು, ವಿಷಯಗಳಿಗಾಗಿ ತಡಕಾಡುವುದಿಲ್ಲ. ಇಂಥದೇ ಸಮಯ, ಸಂದರ್ಭಗಳೆಂಬ (ಸ್ವಯಂ) ನಿರ್ಬಂಧವೂ ಇಲ್ಲ. ಅವರು ಒಬ್ಬರೇ ಇರಲಿ, ಗುಂಪಿನಲ್ಲೇ ಇರಲಿ, ಮಾಧ್ಯಮ ಅದಾವುದೇ ಆಗಿರಲಿ ಸೂಕ್ತ ಸಂದರ್ಭವೊಂದಿದ್ದರೆ ಸಾಕು ಚಿತ್ರಿಸುತ್ತಾರೆ. ಅಷ್ಟರ ಮಟ್ಟಿಗೆ ಮನಸ್ಸು, ಕೈಗಳ ಮೇಲೆ ಹಿಡಿತ, ಮಾಧ್ಯಮಗಳ ಮೇಲೆ ಪ್ರಭುತ್ವ. ಅಂತೆಯೇ ಅವರ ಸೃಷ್ಟಿಯ ಫಲವನ್ನು ಚೌಕಟ್ಟುಗಳಲ್ಲಿಟ್ಟು ನೋಡಬೇಕಾಗುತ್ತದೆ. ಅವರು ಪಡೆದ ಅಕಾಡೆಮಿಕ್ ಕಲಾ ಶಿಕ್ಷಣದ ಕಾರಣವಾಗಿ ಪಾಶ್ಚಾತ್ಯ ಕಲೆಯ ಸಹಜ ಪ್ರಭಾವದೊಂದಿಗೇ ಅವರ ಸೃಷ್ಟಿಕ್ರಿಯೆ ಆರಂಭಗೊಂಡು ಅನನ್ಯವಾಗುತ್ತ ಸಾಗಿದೆ. ದೇಶೀಯ, ಪಾರಂಪರಿಕ ವಿಶೇಷವಾಗಿ ಜನಪದ ದೃಶ್ಯ ಹಾಗೂ ಪ್ರದರ್ಶನ ಕಲೆಗಳ ಸೊಗಡನ್ನು ಈ ಆಧುನಿಕ ದಾರಿಯಲ್ಲೇ ಎರಕ ಹೊಯ್ದಿರುವುದು ಅವರ ಒಟ್ಟು ಕೃತಿರಾಶಿಯ ತಿರುಳಾಗಿ ನಿಲ್ಲುತ್ತದೆ. ಆಧುನಿಕ ಕಲಾಪ್ರವಾಹದ ವಿವಿಧ ಸಿದ್ಧಾಂತ, ಶೈಲಿ, ಆಶಯಗಳ ಹಿನ್ನೆಲೆಯಲ್ಲಿ ಚಿಂತಿಸುವುದಾದರೆ ಯಾವುದೇ ಒಬ್ಬ ಕಲಾವಿದನ ಯಾವುದೇ ಒಂದು ಕೃತಿ ಸಾರ್ವಕಾಲಿಕ ಮಹತ್ವವನ್ನು ಪಡೆದು ಬದುಕಲು ಸಾಧ್ಯವಿಲ್ಲ. ಎಲ್ಲವೂ ಪ್ರಯೋಗದ ಮಟ್ಟದಲ್ಲಿ ಪ್ರಸ್ತುತತೆ ಪಡೆಯುತ್ತದೆ. ಆದರೆ ಕಲಾವಿದನಿಗೆ ಸ್ಪಷ್ಟವಾದ ಕಲ್ಪನೆ ಅಗತ್ಯ. ಈ ಮಾತಿಗೆ ಅಂದಾನಿಯವರ ಪ್ರಯೋಗಾತ್ಮಕ ಕಲಾಸೃಷ್ಟಿ ನಿದರ್ಶನವಾಗಿದೆ.

## ವರ್ಣ ಚಿತ್ರಗಳು

ಅಂದಾನಿಯವರು ಪ್ರಯೋಗಶೀಲರು ಎಂದು ಹೇಳಿದೆ. ಏಕೆಂದರೆ ಅವರು ಮೊದಲಿನಿಂದ ಇದುವರೆಗೂ ಒಂದೇ ಮಾಧ್ಯಮದಲ್ಲಿ ಕೃತಿ ರಚನೆ ಮಾಡುತ್ತ ಬಂದವರಲ್ಲ. ಮಾಧ್ಯಮದಲ್ಲಿ ಆಗಾಗ, ಉದ್ದೇಶಪೂರ್ವಕವಾಗಿ ಸೂಕ್ಷ್ಮ ಬದಲಾವಣೆಯನ್ನು ತಂದುಕೊಂಡವರು. ಹೀಗಾಗಿ ಕಳೆದ ಮೂರು ದಶಕಗಳಲ್ಲಿ ಅವರು ತಮ್ಮ ಬದುಕಿನ ವಿವಿಧ ಘಟ್ಟಗಳಲ್ಲಿ ವಿಭಿನ್ನ ಸಂವೇದನೆಗಳಿಗೆ ಒಳಗಾಗಿ ವೈವಿಧ್ಯಮಯವಾಗಿ ಸೃಷ್ಟಿಸಿದ್ದಾರೆ. ಹಾಗೂ ಅವರದೇ ಆದ 'ಭಾವ' ಮಾತ್ರ ಉದ್ದಕ್ಕೂ ಕಂಡುಬರುತ್ತದೆ. ಆದರೆ ಶೈಲಿಬದ್ಧತೆಯನ್ನು ನಿರಾಕರಿಸಲೆಂಬಂತೆ ಅವರ ಸೃಜನ ಸಾಮರ್ಥ್ಯ ಹಲವು ಸರಣಿ ಕೃತಿಗಳಲ್ಲಿ ಹರಿದು ಬಂದಿದೆ. ವೈಭವ, ವಸಂತ, ಧೂಳು, ಆಟ, ಸುತ್ತಮುತ್ತ, ಗೋರಿಗಳು, ಗೂಳಿ, ವಿನಾಶ ಹೀಗೆ ವೈಭವದಿಂದ ಹಿಡಿದು ವಿನಾಶದವರೆಗಿನ ಕೃತಿಸರಣಿಗಳೆಲ್ಲ ಗಂಭೀರ ರಚನೆಗಳಾಗಿವೆ. ವಿಶೇಷವೆಂದರೆ ಕಪ್ಪುಶಾಯಿಯಿಂದ ರಚಿಸಿದ ಕೃತಿಗಳು ಕ್ರಮೇಣ ತಮ್ಮ ಹೊಸ ಅರ್ಥ ಹಾಗೂ ರೂಪಗಳೊಂದಿಗೆ ವರ್ಣಮಾಧ್ಯಮದಲ್ಲೂ ಸೃಷ್ಟಿಗೊಂಡದ್ದಿದೆ.



ವಸಂತ / Spring

ಈ ಬಹುವರ್ಣ ಮಾಧ್ಯಮದ ಕೃತಿಗಳಲ್ಲಿ ಕ್ಯಾನ್ವಾಸಿನ ಅವಕಾಶವನ್ನು ವಿಶಿಷ್ಟವಾಗಿ ದುಡಿಸಿಕೊಳ್ಳುವ ಅಂದಾನಿಯವರು ತಮ್ಮ ಬಹುಪಾಲು ಕೃತಿಗಳಲ್ಲಿ ಘನಾಕೃತಿಗಳ ವಿವಿಧ ಮೈಗಳನ್ನು ತೋರುವಂತೆ ಆಕಾರಗಳನ್ನು ಸಂಯೋಜಿಸುತ್ತಾರೆ. ಪಾಲ್ ಗಾಗಿನ್, ವಾನ್ ಗೊ, ಪಿಕಾಸೊರಂತಹ[೧೨] ಕಲಾವಿದರನ್ನು ತುಂಬ ಮೆಚ್ಚಿಕೊಂಡಿದ್ದರೂ ಇಂಥ ಕಲಾವಿದರ ಶೈಲಿಯನ್ನು ಅನುಸರಿಸಿದ್ದು ಕಂಡುಬರುವುದಿಲ್ಲ. ಆದರೆ ಪಿಕಾಸೋನ ಪ್ರಭಾವ ಕೆಲವೆಡೆ ಕಾಣುತ್ತದೆ. ಆಕರ್ಷಕ ವರ್ಣಗಳ ಮೇಲೆ ಅಂದಾನಿಯವರಿಗೆ ಮೋಹವಿದ್ದರೂ ಬಳಸುವಿಕೆಯಲ್ಲಿ ಹಿತಮಿತವಿದೆ. ಪ್ರಾಸಾನುಪ್ರಾಸಗಳಂತೆ ಕೆಲವೊಮ್ಮೆ ಆಕೃತಿಗಳ ಮುಖ, ಕೈಕಾಲುಗಳು ರೂಪುಗೊಂಡಿರುವುದು ಸಾಮಾನ್ಯ. ಇಂಥ ಕೃತಿಗಳಲ್ಲಂತೂ ಘನಾಕೃತಿ ಶೈಲಿಯ ದಟ್ಟಪ್ರಭಾವ ಕಾಣುತ್ತದೆ. ಘಾವಿಸಂನ ವರ್ಣಸಾದೃಶ್ಯ, ಸಂಯೋಜನೆಯ ಸಂಕೀರ್ಣತೆ ಸರಳತೆಗಳೂ ಕೆಲಸೃಷ್ಟಿಗಳಲ್ಲಿ ಕಂಡುಬರುತ್ತವೆ. ಅಭಿವ್ಯಕ್ತಿವಾದಿ ಕಲಾವಿದರಂತೆ ವ್ಯಕ್ತಿನಿಷ್ಠತೆ, ಭಾವ ನಿಷ್ಠತೆಗಳು ಕೆಲವೊಮ್ಮೆ ಕಂಡುಬಂದರೆ, ಹಲವು ರೇಖಾತ್ಮಕ ವರ್ಣಚಿತ್ರಗಳಲ್ಲಿ ಪ್ರದೇಶನಿಷ್ಠ ಸೌಂದರ್ಯ ಮಿಳಿತಗೊಂಡಿದೆ. ಬದುಕಿನ ವಿಲಕ್ಷಣ, ವಿಕೃತ ರೂಪಗಳ ಸೌಂದರ್ಯ ಅಭಿವ್ಯಕ್ತಗೊಂಡಿದೆ. ಉದ್ವೇಗ ಆತಂಕಗಳು ಮತ್ತೆ ಮತ್ತೆ ಕಾಡುವ ಅವ್ಯಕ್ತ ನೋವು, ದುಗುಡ, ವ್ಯಾಕುಲತೆಗಳೊಟ್ಟಿಗೇ ಕನಸು, ಗೆಲುವು ಮಹತ್ವಾಕಾಂಕ್ಷೆಗಳೂ ವ್ಯಕ್ತಗೊಂಡು ರೂಪತಳೆದಿವೆ.

ಅಂದಾನಿಯವರ ಬದುಕಿನ ಅತ್ಯಂತ ಸಂತಸದ ದಿನಗಳು ಮೈದುಂಬಿ ಅಭಿವ್ಯಕ್ತಗೊಂಡದ್ದು 'ವಸಂತ' ಸರಣಿಕೃತಿಗಳಲ್ಲಿ. ವಸಂತ ಕೃತಿಗಳಲ್ಲಿ[೧೩] ಪ್ರಕೃತಿ ಮರುಹುಟ್ಟು ಪಡೆಯುತ್ತದೆ. ಆದಿ ಕವಿ ಪಂಪ ಹೇಳುವಂತೆ 'ನಿತ್ಯಂ ಪೊಸತು ಅರ್ಣವಂಬೊಲ್'. ಕವಿ ಬೇಂದ್ರೆ ವಸಂತನ ವೈಭವವನ್ನು ಶಾಬ್ದೀಕರಣಗೊಳಿಸಿರುವಂತೆ ಕಲಾವಿದ ಅಂದಾನಿ ದೃಶ್ಯೀಕರಣಗೊಳಿಸಿದ್ದಾರೆ. ನಿಸರ್ಗ ಸೌಂದರ್ಯ ಇಲ್ಲಿ ಮಡುಗಟ್ಟಿ ನಿಂತಿದೆ. ಚಿತ್ರಿತ ವಸಂತ-ಹೂ, ಕಾಯಿ, ಹಣ್ಣುಗಳಿಂದ ಫಲಭರಿತವಾದ ಮಾಮರವಾಗುವುದರೊಂದಿಗೆ ಹೂಗಳ ಪರಿಮಳ, ಹಕ್ಕಿಪಕ್ಷಿಗಳ ಇಂಚರವೂ ಸೇರಿ ಇಡೀ ಪ್ರಕೃತಿಯೇ ಸ್ವರ್ಗವಾಗುತ್ತದೆ. ಹನ್ನೆರಡೂ ತಿಂಗಳು ಹೊಸ ವೇಷಧರಿಸಿ ನರ್ತಿಸುತ್ತದೆ.

ಇತಿಹಾಸ ಆದರಲ್ಲೂ ಕಲಾ ಇತಿಹಾಸ[೧೪] ಅಂದಾನಿಯವರ ಇಷ್ಟವಾದ ವಿಷಯಗಳಲ್ಲಿ ಒಂದು. ಪದವಿ ಓದುತ್ತಿರುವಾಗಲೇ ಗುಲಬರ್ಗಾ ಪ್ರದೇಶದ ಸುತ್ತಲಿನ ಐತಿಹಾಸಿಕ ಸ್ಥಳಗಳನ್ನು ಅವರು ವೀಕ್ಷಿಸಿದವರು ಮತ್ತು ಅವುಗಳಿಂದಲೇ ಸ್ಫೂರ್ತಿ ಪಡೆದವರು. ಅಲ್ಲಿ ಕಂಡ ಕನ್ನಡ ಸಂಸ್ಕೃತಿಯ ಗತವೈಭವದ ಕುರುಹುಗಳು ಸಹಜವಾಗಿಯೇ ಅವರನ್ನು ಚಿಂತನೆಗೆ ತೊಡಗಿಸಿದ್ದರಿಂದಾಗಿ ಅಲ್ಲಿರುವ ಬೆಂಗಾಡು, ಚೂಪುಕಲ್ಲು, ಸ್ಮಾರಕಗಳು, ಸಮಾಧಿಗಳು, ದೇವಾಲಯ ವಾಸ್ತುಶಿಲ್ಪಗಳು, ಶಾಸನ ಶಿಲ್ಪಗಳು, ಸ್ಮಾರಕ ಶಿಲೆಗಳು, ವೀರಗಲ್ಲು, ಮಾಸ್ತಿಗಲ್ಲುಗಳು ಮುಂತಾದ ಶಿಲ್ಪಗಳ ಭಗ್ನಾವಶೇಷಗಳೆಲ್ಲ ಅಭಿವ್ಯಕ್ತಿಗೆ 'ಮೋಟಿಫ್'

---

೧೨. ಈ ಮೂವರೂ ಪಾಶ್ಚಾತ್ಯ ಕಲಾವಿದರು. ಯುರೋಪಿನ ಆಧುನಿಕ ಕಲಾ ಚಳುವಳಿಗಳಲ್ಲಿ ಎದ್ದು ಕಾಣುವ ಪ್ರಮುಖರು. ಇವರಲ್ಲಿ ಪಿಕಾಸೊ ಹೆಚ್ಚು ಪ್ರಯೋಗಶೀಲ ಕಲಾವಿದ.

೧೩. ವಸಂತಕೃತಿಯೊಂದು ಕಸ್ತೂರಿ ವಿಶೇಷಾಂಕದ ಮುಖಪುಟಕ್ಕೆ ಆಯ್ಕೆಯಾಗಿ ಬಣ್ಣದಲ್ಲಿ ಪ್ರಕಟಗೊಂಡಿದೆ (೧೯೭೩). ಆ ಕಾಲಕ್ಕೆ ಕಲಾವಿದನೊಬ್ಬನಿಗೆ ದೊರೆತ ಕ್ರೆಡಿಟ್ ಅದು.

೧೪. ಡಾ|| ಎಸ್. ಶೆಟ್ಟರ್, ಡಾ|| ಗಿರಡ್ಡಿ ಗೋವಿಂದರಾಜ್, ಚಂದ್ರಕಾಂತ ಕುಸನೂರ, ಆರ್.ಕೆ. ಹುಡುಗಿ ಮತ್ತು ಎಂ.ಪಿ. ಪ್ರಕಾಶ ಕ್ರಮವಾಗಿ ಇತಿಹಾಸಜ್ಞರು, ವಿಮರ್ಶಕರು, ನಾಟಕಕಾರರು, ಸಾಹಿತಿ ಮತ್ತು ಸುಸಂಸ್ಕೃತ ರಾಜಕಾರಣಿಗಳು. ಇವರೆಲ್ಲ ಅಂದಾನಿಯವರ ಸ್ನೇಹವಲಯದಲ್ಲಿ ಪ್ರಮುಖರು. ಹೀಗಾಗಿ ಇತಿಹಾಸ ಮತ್ತು ಸೌಂದರ್ಯಶಾಸ್ತ್ರದಂತಹ ವಿಷಯಗಳಲ್ಲಿನ ಇವರ ಆಸಕ್ತಿ ಬೆಳೆಯುತ್ತ ಹೋಗಿದೆ.



ವೈಭವ / Luxury

ಆಗಿ 'ವೈಭವ' ಸರಣಿ ಕೃತಿಗಳಲ್ಲಿ ಸಾಕಾರಗೊಂಡವು. ಕಾಗದ ಮತ್ತು ಕ್ಯಾನ್ವಾಸ್‌ಗಳ ಮೇಲೆ ಹರಡಿಕೊಂಡ ವೈಭವ ಸರಣಿ ಕೃತಿಗಳು 'ವಸ್ತು' ಮತ್ತು 'ತಂತ್ರ' ಎರಡರಿಂದಲೂ ಒಂದು 'ದೂರ'ವನ್ನು (ಸೈಕಾಲಾಜಿಕಲ್ ಡಿಸ್ಟೆನ್ಸ್) ಸಾಧಿಸಿಕೊಟ್ಟ ಯಶಸ್ವಿ ಕೃತಿಗಳಾಗಿವೆ.

ತಾಂತ್ರಿಕ ದೃಷ್ಟಿಯಿಂದ ಹೇಳುವುದಾದರೆ ಕಾಗದವನ್ನು ಹರಿದು, ಕೆಲವೊಮ್ಮೆ ಕತ್ತರಿಸಿ ಕ್ಯಾನ್ವಾಸ್ ಮೇಲೆ ಬೇಕಾದ ರೀತಿಯಲ್ಲಿ ಹರಡಿ ಹೊಂದಿಸಿ, ಕಪ್ಪು ಬಣ್ಣವನ್ನು ಹರಡುತ್ತ, ಒತ್ತುತ್ತ ಮತ್ತು ಒರೆಸುತ್ತ ರಚಿಸುವ ಮೂಲಕ 'ವಿಶಿಷ್ಟ ಮೈವಳಿಕೆ' ತರುವುದು ಅವರ ವಿಶೇಷತೆ. ದಟ್ಟವಾದ ಕಪ್ಪು, ಬಿಳುಪು, ಬೆಳಕಿನ ಅಸಂಖ್ಯ ಛಾಯೆಗಳ ವಿನ್ಯಾಸಗಳನ್ನು ಉಂಟುಮಾಡುವುದು, ಅಗತ್ಯವಿದ್ದಲ್ಲಿ ಶಾಸನದಂತೆ ಆಕೃತಿಯ ಮೇಲೆ ಪಠ್ಯದ ಒಕ್ಕಣೆ ರೂಪಿಸುವುದು ಅವರ ತಂತ್ರ. ಈ ತಂತ್ರ ಅವರಿಗೆ ನೀರು ಕುಡಿದಷ್ಟೇ ಸರಳ.

ಚಿತ್ರ ಜಗತ್ತಿನಲ್ಲಿ ಬಿಳಿಯ ಬಣ್ಣದ ಅವಕಾಶದ ಮೇಲೆ ಕಪ್ಪು ಬಣ್ಣ ನೀಡುವ ಒಳನೋಟಗಳ ವೈವಿಧ್ಯವನ್ನು ಬೇರಾವುದೇ ಬಣ್ಣ ನೀಡಲಾರದು. ಅಂದಾನಿ ಆ ಅನುಭವಗಳ ಆಳ ವಿಸ್ತಾರವನ್ನು ಅನುಭವಿಸಲು ತೊಡಗಿದಂತೆಲ್ಲ ಅದು ತನ್ನ ನಿಗೂಢತೆಯನ್ನು ದಟ್ಟವಾಗಿಸಿಕೊಳ್ಳುತ್ತಲೇ ಆಳ ಆಳಕ್ಕೆ ಹೋಗಿದೆ. ಅದರ ವಿವಿಧ ಛಾಯಾಂತರಗಳೆಲ್ಲ ಅವರ ಸಂವೇದನೆಯ ತೀವ್ರತೆಗೆ ಪೂರಕವಾಗಿ ನೆರವಾಗಿವೆ. ಈ ಬಗೆಯ ಕೃತಿಗಳ ರಚನೆಯಲ್ಲಿ ಅತ್ಯಂತ ತೃಪ್ತಿ ದೊರೆತಿದ್ದರಿಂದಲೇ ಅಂದಾನಿಯವರು ಈ ಕಪ್ಪು ಬಣ್ಣವೊಂದನ್ನೇ ಬಳಸಿ ಬೃಹದಾಕಾರದ ಕೃತಿಗಳನ್ನು ರಚಿಸಲು ಸಾಧ್ಯವಾಯಿತು. ಈ ನಿಟ್ಟಿನಲ್ಲಿ ಅವರಿಗೆ ಮೊದಲ ಶ್ರೇಯಸ್ಸು ಸಂದಿದೆ. ನವೀನ ಎನ್ನಬಹುದಾದ ರೀತಿಯಲ್ಲಿ ಅವಕಾಶವನ್ನು ಹಂಚುವುದು, ರೂಪ, ಆಕಾರಗಳನ್ನು ರಚಿಸುವುದು, ಕನಸಿನ ಕಲ್ಪನಾ ಲೋಕದ ಅಸಂಗತ ರೂಪಗಳನ್ನು ನಿರ್ಮಾಣ ಮಾಡುವುದು ಇವೆಲ್ಲ ಎಂಭತ್ತರ ದಶಕದಲ್ಲಿ ಹೊಸ ಅನುಭವವನ್ನೇ ನೀಡಿವೆ. ಬೆಂಗಳೂರಿನಲ್ಲಿ ಈ ಸರಣಿ ಕೃತಿಗಳನ್ನು ಮೊದಲ ಬಾರಿಗೆ[೧೫] ಪ್ರದರ್ಶಿಸಿದಾಗ ಇವರಿಗೆ ಗಣನೀಯ ಪ್ರಶಂಸೆ ದೊರೆಯಿತು. ತದನಂತರ ಜಮಖಂಡಿಯ ಖ್ಯಾತ ಕಲಾವಿದ ವಿಜಯ ಸಿಂಧೂರರ ಜೊತೆಗೂಡಿ ದೆಹಲಿಯ ತ್ರಿವೇಣಿ ಗ್ಯಾಲರಿಯಲ್ಲಿ ಪ್ರದರ್ಶಿಸಿದ್ದು[೧೬] ಇದೇ ಸರಣಿಯ ದೊಡ್ಡ ಆಕಾರದ ಕಲಾಕೃತಿಗಳು. ಇಲ್ಲೆಲ್ಲ ಕಲಾವಿಮರ್ಶಕರಿಂದ ಪ್ರಶಂಸೆಯ

೧೫. 'ಕಲಾಪ್ರದರ್ಶನ ಸಂಸ್ಕೃತಿ'ಯನ್ನು ಕಲಬುರ್ಗಿ ಭಾಗದಲ್ಲಿ ಮೊಟ್ಟಮೊದಲು ಹುಟ್ಟು ಹಾಕಿದ ಶ್ರೇಯಸ್ಸು ಅಂದಾನಿಯವರದು. ೧೯೬೮ರಲ್ಲಿ 'ಪ್ರತಿರೂಪ' ಎಂಬ ಹೆಸರಿನಲ್ಲಿ ನಾಲ್ವರು ಕಲಾವಿದರು ಗುಂಪು ಪ್ರದರ್ಶನ ಮಾಡಿದರು. ಇನ್ನುಳಿದ ಮೂವರೆಂದರೆ ಬಸವರಾಜ ಉಪ್ಪಿನ, ಎಂ.ಬಿ. ಲೋಹಾರ ಮತ್ತು ಶಿವಶರಣ ಉಪ್ಪಿನ.

೧೬. ಆಗಿನ ಉಪರಾಷ್ಟ್ರಪತಿಯಾಗಿದ್ದ ಬಿ.ಡಿ. ಜತ್ತಿ ಪ್ರದರ್ಶನವನ್ನು ಉದ್ಘಾಟಿಸಿದರು.



ಸುರಿಮಳೆ. ಇದರಿಂದ ಮತ್ತಷ್ಟು ಉತ್ಸುಕಗೊಂಡ ಅಂದಾನಿ ಸತತ ಐದು ವರ್ಷಗಳ ಕಾಲ ಈ ಸರಣಿ ಕೃತಿಗಳನ್ನೇ ರಚಿಸುತ್ತ ಬಂದರು. ಈ ಮಧ್ಯೆ ದೆಹಲಿ ಪ್ರದರ್ಶನದ ನಂತರ ಅವರ ಆತ್ಮ ವಿಶ್ವಾಸ ಹೆಚ್ಚಿ ಮುಂಬೈನ ಜಹಾಂಗೀರ್ ಆರ್ಟ್ಸ್ ಗ್ಯಾಲರಿಯಲ್ಲಿ ಏಕವ್ಯಕ್ತಿ ಪ್ರದರ್ಶನ ನೀಡಿದರು. ಆಗ ಮುಂಬೈಯಲ್ಲಿ ವಾಸವಾಗಿದ್ದ ಖ್ಯಾತಕಲಾವಿದರಾದ ಎಸ್.ಎಂ. ಪಂಡಿತ, ಕೆ.ಕೆ. ಹೆಬ್ಬಾರ್[೧೭], ಲಕ್ಷ್ಮಣ ಪೈ ಮತ್ತು ಆರಾ ಅವರುಗಳು ಅಂದಾನಿಯವರ ಕಲಾಪ್ರದರ್ಶನ ವೀಕ್ಷಿಸಿ ಬೆನ್ನು ಚಪ್ಪರಿಸಿದರೆ[೧೮], ಪ್ರಸಿದ್ಧ ಕಲಾವಿಮರ್ಶಕರಾಗಿದ್ದ ಶೋಲಾಪುರ್‌ಕರ್, ನಾಡಕರ್ಣಿ, ಶರ್ಮಾ, ಕ್ಲರ್ಕ್, ವಾಸುದೇವ ಅವರುಗಳು ಕಲಾಕೃತಿಗಳನ್ನು ಮೆಚ್ಚಿ ಹೊಗಳಿಬರೆದರು. ೧೯೬೨ರಲ್ಲಿ ಇದೇ ಸರಣಿ ಕೃತಿಯೊಂದಕ್ಕೆ ಕೇಂದ್ರ ಲಲಿತಕಲಾ ಅಕಾಡೆಮಿಯ 'ರಾಷ್ಟ್ರೀಯ ಪ್ರಶಸ್ತಿ'ಯೂ ದೊರಕಿತು.

ಕಪ್ಪು ಬಣ್ಣವೊಂದರಲ್ಲಿ ಬಹಳಷ್ಟು ಕಾಲ ಕಲಾಕೃತಿಗಳ ರಚನೆಯಲ್ಲಿ ತೊಡಗಿದ್ದರಿಂದಾಗಿ ಕಣ್ಣು ಮತ್ತು ಮೆದುಳಿನ ಆರೋಗ್ಯದ ಮೇಲೆ ಕೆಡುಕಿನ ಪರಿಣಾಮ ಶುರುವಾಯ್ತು. ಆವಾಗಲೇ ಅಂದಾನಿಯವರು ಕಪ್ಪು ಬಣ್ಣ ಮತ್ತು ಬಿಳಿಯ ಅವಕಾಶಗಳ ಕತ್ತಲೆ ಬೆಳಕಿನ ಆಟದಿಂದ ಹೊರಗೆ ಬಂದು ಅದೇ ಶೈಲಿಯ ಬಹುವರ್ಣದ (ಮಿಶ್ರಮಾಧ್ಯಮ) ಕಲಾಕೃತಿಗಳನ್ನು ರಚಿಸಿದರು. 'ಸುತ್ತಮುತ್ತ' ಎಂಬ ಶೀರ್ಷಿಕೆಯಡಿಯಲ್ಲಿ ರಚನೆಗೊಂಡ ಇವುಗಳೆಲ್ಲ ಮುದ್ರಣದ ಪರಿಣಾಮಗಳನ್ನು, ಛಾಯಾ ಮೌಲ್ಯಗಳನ್ನು ಸಮರ್ಥವಾಗಿ ಬಳಸಿಕೊಂಡ ಒರಟು, ನಯ ಮೈವಳಿಕೆಗಳೊಂದಿಗೆ ಒಂದರಮೇಲೊಂದು, ಆಚ್ಛಾದಿಸಿದಂತೆ ಪಾರದರ್ಶಕವಾಗಿ ತೋರಿವೆ. ಈ ಸಂಯೋಜನೆಗಳು ಸರಳವೂ ಹೌದು. ಸಂಕೀರ್ಣವೂ ಹೌದು. ಹ್ಯಾಂಡಮೇಡ್ ಕಾಗದಗಳ ಮೇಲೆ ರೋಲರನ್ನು ಬೇಕಾದಂತೆ ಉರುಳಾಡಿಸಿ ರಚಿಸಿದ ಈ ಕೃತಿಗಳು ಇವರ ಕಪ್ಪು ಬಿಳುಪಿನ ಕೃತಿಗಳಷ್ಟೇ ಮಹತ್ವ ಪಡೆದುಕೊಂಡವು.

ಬಿಗಿಯಾದ, ಒತ್ತೊತ್ತಾದ ಸ್ಥಳಾವಕಾಶಗಳಿಂದ ಕೂಡಿದ 'ಹೂಳು' ಶೀರ್ಷಿಕೆಯಡಿಯ ಕೃತಿಗಳು, ಅನಂತರ ಸ್ಥೂಲಕಾಯದ ಹೆಂಗಸರ 'ಫ್ಯಾಟ್ ವುಮನ್' ಮಾಲಿಕೆಯ ಜಲವರ್ಣ ಸಂಯೋಜನೆಯ ಚಿತ್ರಗಳು ಇವರಿಂದ ಈ ಮಧ್ಯೆ ಸೃಷ್ಟಿಗೊಂಡವು.

ಸತತ ಏಳುವರ್ಷಗಳ ಕಾಲ 'ವೈಭವ' ಸರಣಿ ಕೃತಿಗಳ ರಚನೆಯಲ್ಲಿ ಮೈಮರೆತ ಅಂದಾನಿಯವರು ಅನಂತರ ಅದರಿಂದ ಹೊರಬಂದು 'ಆಟ' ಮಾಲಿಕೆಯ ಚಿತ್ರಗಳನ್ನು ರಚಿಸಿದರು.

ಮೊದಲಿಂದಲೂ ಇವರಿಗೆ ಸರೂಪ (ಫಿಗರೇಟಿವ್) ಚಿತ್ರಣದಲ್ಲಿ ಆಸಕ್ತಿ ಇದ್ದರೂ 'ವೈಭವ' ಸರಣಿಗಳಲ್ಲಿ ಅವನ್ನು ತಂದುಕೊಂಡಿರಲಿಲ್ಲ. ಆದರೆ 'ಆಟ' ಸರಣಿ ಚಿತ್ರಗಳಲ್ಲಿ ಸರೂಪಗಳು ಮತ್ತೆ ಕಾಣಿಸಿಕೊಂಡವು. ಅದಕ್ಕೆ ಕಾರಣವೇನೆಂದರೆ ದೀರ್ಘಕಾಲದಿಂದ ಅವರು ಕಪ್ಪು ಬಿಳುಪು ನಿರೂಪ ಚಿತ್ರಗಳನ್ನೇ ಒಂದರ್ಥದಲ್ಲಿ ಕ್ಲೀಷೆ ಎನ್ನಿಸುವಷ್ಟರ ಮಟ್ಟಿಗೆ ರಚಿಸುತ್ತ ಬಂದಿರುವುದು. ಹೀಗಾಗಿ ಅವರ ಅಭಿವ್ಯಕ್ತಿಯ ದಾರಿ ರೂಪ ಚಿತ್ರಗಳೆಡೆಗೆ ಮತ್ತೆ ಸಹಜವಾಗಿ ಹೊರಳಿತು. ತೈಲ, ಅಕ್ರಲಿಕ್ ವರ್ಣಗಳ ಮಾಧ್ಯಮದಲ್ಲಿ ರಚಿಸಿದ 'ಆಟ' ಮಾಲಿಕೆಯ ಈ ಕಲಾಕೃತಿಗಳನ್ನು ಖ್ಯಾತ ಕಲಾವಿದರಾದ ಆದಿಮೂಲಂ,

೧೭. ಕೆ.ಕೆ. ಹೆಬ್ಬಾರರು ಎರಡು ಬಾರಿ ಕಲಾನಿಕೇತನಕ್ಕೆ ಭೇಟಿ ಇತ್ತಿದ್ದರು ಮತ್ತು ಅಂದಾನಿಯವರ ಕ್ರಿಯಾಶೀಲತೆಯನ್ನು ತುಂಬ ಮೆಚ್ಚಿಕೊಂಡಿದ್ದರು.

೧೮. ಪಲ್ಸೀಕರ್‌ರು ಅಂದಾನಿಯವರ ಕಲಾನಿಕೇತನಕ್ಕೆ ಆಗಮಿಸಿ ಮೂರುದಿನ ತಂಗಿದ್ದರಲ್ಲದೆ ಮೂರು ಕಲಾಕೃತಿಗಳನ್ನು ರಚಿಸಿಕೊಟ್ಟರಂತೆ.

ದಕ್ಷಿಣಾಮೂರ್ತಿ ಅವರುಗಳೊಂದಿಗೆ ಮುಂಬೈನ ಜಹಾಂಗೀರ ಆರ್ಟ ಗ್ಯಾಲರಿಯಲ್ಲಿ ಪ್ರದರ್ಶಿಸಿದರು. ಈ ಚಿತ್ರಗಳಲ್ಲಿ ಯುವತಿಯರು ಮತ್ತು ಮಧ್ಯ ವಯಸ್ಕ ಹೆಂಗಸರು ಹೆಚ್ಚಾಗಿ ಪಂಜಾಬಿ ಉಡುಪು[೧೯] ತೊಟ್ಟವರು. ಇದೇ ಮಾಲಿಕೆಯ ಚಿಕ್ಕ ಆಕಾರದ ಹಲವಾರು ಚಿತ್ರಗಳನ್ನು 'ರೈಸ್ ಪೇಪರ್' ಬಳಸಿಯೂ ಆಕ್ರಲಿಕ್ ಬಣ್ಣದಿಂದ ರಚಿಸಿದ್ದಾರೆ. ಮೇಲ್ನೋಟಕ್ಕೆ ಮಕ್ಕಳಾಟಿಕೆಯಂತೆ ಕಾಣುವ ಈ ಸಂಯೋಜನಾ ಚಿತ್ರಗಳು ಮುಗ್ಧತೆಯೊಂದಿಗೆ ಆತಂಕ, ವ್ಯಾಕುಲತೆ, ಅನಿಶ್ಚಿತತೆ, ಸೋಲು ಗೆಲುವುಗಳ ಛಾಯೆಗಳೆಲ್ಲ ವಿಶೇಷಾನುಭವ ನೀಡುತ್ತವೆ.

ಮಧ್ಯಮ ವರ್ಗದ ಜನರ ಜೀವನ ಇದರ ವಸ್ತು. ಜೀವನ ಒಂದು ಆಟ. ಬಡತನ ಶ್ರೀಮಂತಿಕೆಗಳ ನಡುವಿನ ಆಟ-ಹೊಯ್ದಾಟ, ಶ್ರಮಿಕ ವರ್ಗ ಇತ್ಯಾದಿ. ಹೀಗೆ ಮಕ್ಕಳ ಆಟವನ್ನು ಉದ್ದೇಶವಾಗಿಟ್ಟುಕೊಂಡು ಆರಂಭವಾದ ಅಂದಾನಿಯವರ 'ಆಟ' ಚಿತ್ರಸರಣಿಯು ಜೀವನವೇ ಒಂದು 'ಆಟ' ಎಂಬ ನಿಲುವಿಗೆ ಬಂದು ನಿಂತಿದೆ. ಈ ಆಟದಲ್ಲಿ ಏರು-ಪೇರು, ಕಲ್ಲು-ಮುಳ್ಳು, ಕಷ್ಟ-ಕಾರ್ಪಣ್ಯಗಳು ಇವೆಯೆಂಬುದನ್ನು ತೋರ್ಪಡಿಸುವುದು ಇವರ ಉದ್ದೇಶವಾಗಿ ತೋರಿದೆ. ಕಣ್ಣುಮುಚ್ಚಾಲೆ ಆಟ, ಬುಗುರಿ ಆಟ, ಗೋಲಿಗುಂಡಿನ ಆಟ ಇಂಥವುಗಳು ಆಗೆಲ್ಲ ಅಂದಾನಿಯವರ ಬಾಲ್ಯದ ಪ್ರೀತಿಯ ಆಟಗಳು. ಅವೆಲ್ಲ ಇವರ ಸೃಜನ ಪ್ರಜ್ಞೆಯಲ್ಲಿ ಹರಿದು ಬಂದಿವೆ. ಈ ಆಟ ಮಾಲಿಕೆ ಚಿತ್ರಗಳು ಅಂದಾನಿಯವರ ರೇಖಾ ಚಿತ್ರಗಳಲ್ಲೂ ಸಾಕಷ್ಟು ಅಭಿವ್ಯಕ್ತಗೊಂಡಿವೆ.




ಒಮ್ಮೆ ದೊಡ್ಡ ಬಂಡೆಗಲ್ಲೊಂದು ಕಲಬುರ್ಗಿಯ ಸೂಪರ್ ಮಾರ್ಕೆಟ್‌ನಲ್ಲಿ ನಡೆದು ಹೊರಟಿತ್ತು. ಮುಸ್ಸಂಜೆಯ ಬೆಳಕಲ್ಲಿ ಮುಂಬೈನ ಖ್ಯಾತ ಕಲಾವಿದ ಎನ್.ಎಸ್. ಬೇಂದ್ರೆ[೨೦]ಯವರೊಂದಿಗೆ ಹರಟುತ್ತ ಹೊರಟಿದ್ದ ಅಂದಾನಿಯವರಿಗೆ 'ಗೂಳಿ' ಕಂಡಿದ್ದು ಹೀಗೆ. ಟಾರ್ ರಸ್ತೆಗೆ ಅಡ್ಡಲಾಗಿ ಸಾಗಿದ ಅದರ ನಡೆ 'ಗೂಳಿ ನಡೆದದ್ದೇ ಮಾರ್ಗ' ಎಂಬಂತಿತ್ತು. ಕ್ಷಣ ಹೊತ್ತು ಅಂದಾನಿ ತಾವು ಗೈದ 'ಸಾಧನೆ' ಮತ್ತು 'ಗೂಳಿ'ಗಳನ್ನು ಪರಸ್ಪರ ಉಪಮಾನೋಪಮೇಯಗಳಾಗಿಸಿಕೊಂಡರೇನೋ! 'ಗೂಳಿ' ಸರಣಿ ಕೃತಿಗಳಲ್ಲಿ ಮೈಕೊಡವಿ ವಿವಿಧ ಭಂಗಿಗಳಲ್ಲಿ, ವಿಭಿನ್ನ ಚಿತ್ತವೃತ್ತಿಗಳನ್ನು ತೋರ್ಪಡಿಸಿತು. ಪುರುಷ ಸಂಕೇತವಾಗಿ, ಶಕ್ತಿ ಸ್ವರೂಪಿಯಾಗಿ, ತುಂಬು-ಜ್ಞಾನಿಯಾಗಿ[೨೧] ಕಂಡಿತು. ಎತ್ತರದ ಇಣಿ, ಬಲಶಾಲಿಯಾದ ತೂಕದ ಮೈಮಾಟ, ಬಂಡೆ ತರಹ ದೃಢತೆ, ಘನತೆ(ಸಾಲಿಡಿಟಿ) ಒಂದೊಂದೂ ಅರ್ಥಪೂರ್ಣವೆನಿಸಿ ಚಿತ್ರಣಗೊಂಡವು. ಬಾಲ್ಯದಲ್ಲೇ ತಮ್ಮೂರಲ್ಲಿ ಬಗೆಬಗೆಯ ಹೋರಿಗಳನ್ನು ಪಾಟಿಯಮೇಲೆ ಗೀಚಿದ ಅನುಭವಗಳು ಇದರಲ್ಲಿ ಸೇರಿಕೊಂಡುದುಂಟು. ಆದರೆ ಆ ಹೋರಿಗಿಂತಲೂ ಭಿನ್ನವಾದ ವರ್ಚಸ್ಸು (ಇಮೇಜ್) ಗೂಳಿಯದು. ಗ್ರಾಮೀಣರಲ್ಲಿ ಗೂಳಿಗೆ ದೈವತ್ವದ ಆರೋಪ. ಅಂದಾನಿಯವರಿಗೆ

---

೧೯. ೧೯೯೨ರಲ್ಲಿ ಜಮ್ಮುವಿನಲ್ಲಿ ನಡೆದ ಕೇಂದ್ರ ಲಲಿತಕಲಾ ಅಕಾಡೆಮಿಯ ಕಲಾ ಶಿಬಿರವೊಂದಕ್ಕೆ ಅಂದಾನಿ ಹೋಗಿದ್ದರು. ಅಲ್ಲಿ ಭಾರತದೆಲ್ಲೆಡೆಗಿಂತಲೂ ಹೆಚ್ಚಾಗಿ ಪಂಜಾಬಿ ಉಡುಪು (ಚೂಡಿದಾರ) ತೊಡುತ್ತಿರುವುದು ಕಂಡು ಪ್ರೇರಣೆಗೊಂಡರು.

೨೦. ಎನ್.ಎಸ್. ಬೇಂದ್ರೆಯವರು ಕಲಾನಿಕೇತನಕ್ಕೆ ಭೇಟಿಯಿತ್ತಾಗ ಗುಲಬರ್ಗಾದ ಗೂಳಿ, ಎಮ್ಮೆ ಮತ್ತು ಕೋಣಗಳನ್ನು ಕಂಡು, ಅವುಗಳ ರೂಪ, ಆಕಾರ, ಬಣ್ಣಗಳನ್ನು ತುಂಬ ಮೆಚ್ಚಿಕೊಂಡರಲ್ಲದೆ ಪ್ರಾತ್ಯಕ್ಷಿಕೆಯಲ್ಲಿ ಎಮ್ಮೆಗಳನ್ನೇ ಚಿತ್ರಿಸಿದರಂತೆ.

೨೧. ಆಂಧ್ರಪ್ರದೇಶದ 'ಚಂದ್ರಶೇಖರ' ಎಂಬ ಕಲಾವಿದ 'ಮಂಗ' ಸರಣಿ ಚಿತ್ರಗಳಿಗಾಗಿ ಪ್ರಸಿದ್ಧ. ಆತ ಮಂಗನನ್ನು ಮಾನವನಂತೆ, ಪ್ರತಿಭಾವಂತ ತತ್ವಜ್ಞಾನಿಯಂತೆ ಕಂಡು ಚಿತ್ರಿಸಿದ್ದಾನೆ. ಅಂದಾನಿಯವರು ಗೂಳಿಗಳನ್ನು ಕಂಡದ್ದೂ ಹೀಗೆ.

ಗೂ ಮಾನವೀಯತೆಯ, ಶಾಂತಿಯ ಮತ್ತು ಸಮೃದ್ಧಿಯ ಸಂಕೇತವಾಗಿಯೂ ಕಂಡಿದೆ-ಈ ಕೃತಿಗಳಲ್ಲಿ.



ಅಂದಾನಿ ಅವರ ನೇತೃತ್ವದಲ್ಲಿ ರಾಜಲಕ್ಷ್ಮೀ ಸಿಮೆಂಟ್ ಕಾರ್ಖಾನೆ ಬಳಿ ನಿರ್ಮಿಸಿರುವ

### ಭಿತ್ತಿ ಚಿತ್ರಗಳು

ಅಂದಾನಿಯವರು ಭಿತ್ತಿಚಿತ್ರಗಳನ್ನೂ[೨೨] (ಫ್ರೆಸ್ಕೊ ಪೇಂಟಿಂಗ್) ರಚಿಸಿದ್ದಾರೆ. ೧೯೭೦ರಲ್ಲಿ ಅದೇ ತಾನೇ ಡಿಪ್ಲೊಮಾ ಪಾಸಾಗಿದ್ದ ಇವರಿಗೆ ಅಪೂರ್ವ ಅವಕಾಶವೊಂದು ಒದಗಿತ್ತು. ರಾಜಸ್ಥಾನದ ಬನಸ್ಥಲಿ ವಿದ್ಯಾಪೀಠದಲ್ಲಿ ಸಾಂಪ್ರದಾಯಿಕ ಭಿತ್ತಿಚಿತ್ರ ರಚನಾ ತರಬೇತಿಗೆಂದು ಕರ್ನಾಟಕದ ಕಲಾವಿದರ ಗುಂಪೊಂದು ಆಯ್ಕೆಯಾಗಿತ್ತು. ಆರ್.ಎಂ. ಹಡಪದ, ಎಸ್.ಆರ್. ಸ್ವಾಮಿ, ಎಸ್.ಎಸ್. ಕುಕ್ಕೆ, ಕೆ.ಡಿ. ಪತ್ತಾರ ಅವರುಗಳನ್ನೊಳಗೊಂಡ ಈ ಗುಂಪಿನಲ್ಲಿ ಅಂದಾನಿಯವರೂ ಇದ್ದರು. ದೇಶದ ಬೇರೆ ಬೇರೆ ರಾಜ್ಯಗಳಿಂದಲೂ ಆಗಮಿಸಿದ ಕಲಾವಿದರೊಟ್ಟಿಗೇ ಬನಸ್ಥಲಿಯಲ್ಲಿ ಕೆಲಸ ಮಾಡುವ ಮೂಲಕ ಇವರು ಭಿತ್ತಿಚಿತ್ರ ರಚನೆಯ ಹಲವು ತಂತ್ರಗಳನ್ನು ಕಲಿತುಕೊಂಡು ಬಂದರು. ಬನಸ್ಥಲಿಯಲ್ಲಿ ತಾವು ಕಲಿತ ಭಿತ್ತಿಸಿದ್ಧತೆ, ಚಿತ್ರರಚನೆ, ಅವುಗಳ ವಿವಿಧ ಕ್ರಮ ಮತ್ತು ಹಂತಗಳು ಇತ್ಯಾದಿ ತಾಂತ್ರಿಕ ಅಂಶಗಳನ್ನು ಅನುಸರಿಸಿ ಕರ್ನಾಟಕದಲ್ಲೂ ಆ ಮಾದರಿಯ ಭಿತ್ತಿಚಿತ್ರಗಳನ್ನು ರಚಿಸಬೇಕೆಂದಿದ್ದ ಅವರ ಕನಸು ಸಾಕಾರವಾಗಲಿಲ್ಲ. ಆದರೆ ತಾವೇ ಕಂಡುಕೊಂಡಿದ್ದ ಕೆಲವು ಸರಳ ಕ್ರಮಗಳನ್ನು ಅನುಸರಿಸಿ ನಾಕೆಂಟು ಭಿತ್ತಿಚಿತ್ರಗಳನ್ನು ರಚಿಸಿದ್ದಾರೆ. ರಾಜಶ್ರೀ ಸಿಮೆಂಟ್ (ಮಳಖೇಡ)ನಲ್ಲಿ ೧೦ x ೧೦೦ ಅಡಿ ಅಳತೆಯ ದೊಡ್ಡದಾದ ಭಿತ್ತಿಚಿತ್ರವನ್ನು ಅಕ್ರಲಿಕ್ ವರ್ಣಮಾಧ್ಯಮದಲ್ಲಿ ರಚಿಸಿದ್ದಾರೆ. 'ದುಡಿಮೆಯೇ ಕೈಲಾಸ, ಕಾರ್ಮಿಕರೇ ದೇಶದ ನಿಜವಾದ ಸಂಪತ್ತು' ಇತ್ಯಾದಿ ಇದರ ವಸ್ತು. ತಮ್ಮ ಸಂಸ್ಥೆಯ ವಾಸ್ತುಶಿಲ್ಪದ ಗೋಡೆಯೊಂದರ ಮೇಲೆ ವಿವಿಧ ಬಣ್ಣಗಳ ಅಕ್ರಲಿಕ್ ಹಾಳೆಗಳನ್ನು ಬಳಸಿ ಭಿತ್ತಿಚಿತ್ರವೊಂದನ್ನು ರಚಿಸಿದ್ದಾರೆ. ಇತ್ತೀಚೆಗೆ ಗುಲಬರ್ಗಾದ ಮಿನಿವಿಧಾನಸೌಧದಲ್ಲೂ ೧೪ x ೪೨ ಅಡಿ ಅಳತೆಯ ದೊಡ್ಡದಾದ ಭಿತ್ತಿಚಿತ್ರವನ್ನು ರಚಿಸಿರುವುದನ್ನು ಕಾಣಬಹುದು. 'ಸ್ವಾತಂತ್ರ್ಯಾ ನಂತರ ಕಲಬುರ್ಗಿ' ಇದರ ವಸ್ತು. ತಾಂತ್ರಿಕವಾಗಿ ಭಿತ್ತಿಚಿತ್ರದ ರಚನೆ ಬಗ್ಗೆ ಜ್ಞಾನವಿಸ್ತರಿಸಿದ್ದರೂ ಅದನ್ನು ಕರ್ನಾಟಕದಲ್ಲಿ ಬಳಸಿಕೊಳ್ಳಲಾಗದ್ದಕ್ಕೆ ಅವರು ಇಂದಿಗೂ ವಿಷಾದಿಸುತ್ತಾರೆ.

### ರೇಖಾಚಿತ್ರಗಳು

ಕಲಾವಿದನೊಬ್ಬ ತನ್ನ ಅಂತರಂಗದ ತುಮುಲಗಳ ಅಭಿವ್ಯಕ್ತಿಗೆ ರೇಖೆಗಳನ್ನು ದುಡಿಸಿಕೊಳ್ಳುವುದರ ಮೂಲಕ ಮೂರ್ತಗೊಳಿಸುವ ರೂಪಗಳನ್ನು ರೇಖಾಚಿತ್ರಗಳೆಂದು ಕರೆಯಬಹುದು. ಬಣ್ಣಗಳ ಆಡಂಬರವಿಲ್ಲದೇ ಯಾವ ಕಟ್ಟಳೆಗೂ ಒಳಪಡದೇ ಸಹಜಸ್ಫೂರ್ತಿಯಿಂದ ಸೃಷ್ಟಿಗೊಳ್ಳುವ ಈ ರೇಖಾಚಿತ್ರಗಳು ಕಲಾವಿದನ ಒಳಜಗತ್ತಿನ ನೈಜ ನಿರೂಪಣೆಗಳಾಗಿರುತ್ತವೆ[೨೩]. ಆದಕ್ಕಾಗಿಯೇ ರೇಖಾಚಿತ್ರಗಳು ಕಲಾವಿದನ ಸಹಿ ಇದ್ದಂತೆ ಎಂಬ ಮಾತು ಪ್ರಚಲಿತಗೊಂಡಿರಬೇಕು. ಜಗತ್ತಿನ ಬಹುತೇಕ ಪ್ರಸಿದ್ಧ ಕಲಾವಿದರೆಲ್ಲ ರೇಖಿಸುತ್ತಲೇ ಕಲಾವಿದರಾಗಿ ರೂಪುಗೊಂಡಿದ್ದಾರೆ. ರೇಖಾಚಿತ್ರಕಲೆ ಸುಲಭವೇನಲ್ಲ. ಯಾರು ರೇಖೆಗಳ ಮೇಲೆ ವಿಶೇಷವಾದ ಪ್ರಭುತ್ವವನ್ನು ಸಾಧಿಸಿ ಹದವರಿತು ಬಳಸಬಲ್ಲರೋ ಅಂಥವರಿಗೆ ಮಾತ್ರ ಅವು ಅಡಿಯಾಳಾಗುತ್ತವೆ. ಮತ್ತು ಹಾಗಾದಾಗ ಮಾತ್ರವೇ ಅವರ ನಿರಪೇಕ್ಷಿತ ಗೀಚುಗಳೂ ಕೂಡ ರೇಖಾಚಿತ್ರಗಳಾಗಿ ಮೈದಳೆಯಲು ಸಾಧ್ಯವಾಗುತ್ತವೆ.

---

೨೨. ಕಲ್ಲಿನ ಭಿತ್ತಿಯ ಮೇಲೆ ಮಣ್ಣು, ಸಗಣಿ, ಅಮೃತಶಿಲೆಯ ಹುಡಿ, ಹುಲ್ಲು ಇತ್ಯಾದಿಗಳಿಂದ ಕೂಡಿದ ಹದಗೊಳಿಸಿದ ಪದಾರ್ಥದಿಂದ ಚಪ್ಪಟೆ ಪದರು ನಿರ್ಮಿಸಿ ಅದು ಹಸಿಯಾಗಿರುವಾಗಲೇ ರೇಖಾಚಿತ್ರ ರಚಿಸಿ ಬಣ್ಣತುಂಬುವ ವಿಧಾನ. ಇಂಗ್ಲೀಷ್‌ನಲ್ಲಿ ಇದಕ್ಕೆ ಫ್ರೆಸ್ಕೊ ಎನ್ನುವರು.

೨೩. ನೋಡಿ; 'ನೆಲಕ್ಕೆ ನೆರಳಾದವರು':ಎ.ಕೆ.ರಾಮೇಶ್ವರ(ಸಂ), ಪು.೧೯.

ಹೀಗೆ ರೇಖೆಗಳನ್ನು ಪಳಗಿಸಿಕೊಂಡು ಸೃಜನಶೀಲವಾದ ದೃಶ್ಯಾನುಭವವನ್ನು ಸಾಧ್ಯವಾಗಿಸುವ ಸಹಜ ಪ್ರತಿಭಾಶಾಲಿಗಳು ಕೆಲವರೇ. ಹೆಬ್ಬಾರ, ಹುಸೇನ್, ಅಲಮೇಲಕರ[೨೪], ಆದಿಮೂಲಂ, ಹಡಪದ, ವಾಸುದೇವ ಇಂಥ ಕೆಲವು ಬೆರಳೆಣಿಕೆಯಷ್ಟು ಕಲಾವಿದರು ಮಾತ್ರ. ಈ ಸಾಲಿನಲ್ಲಿ ವಿ.ಜಿ. ಅಂದಾನಿಯವರ ಹೆಸರೂ ನಿಲ್ಲುತ್ತದೆ. ಹಲವು ಸರಣಿಚಿತ್ರಗಳಿಂದ ಉತ್ತಮ ವರ್ಣಚಿತ್ರಕಾರರೆಂದೇ ಪ್ರಸಿದ್ಧರಾದ ಇವರು ಅಷ್ಟೇ ಶ್ರೇಷ್ಠಮಟ್ಟದ ರೇಖಾಚಿತ್ರಗಾರರೂ ಕೂಡ. ಸಂಖ್ಯೆಯಲ್ಲಿ ಹೇಳುವುದಾದರೆ ಇವರ ರೇಖಾಚಿತ್ರಗಳು ಎರಡು ಸಾವಿರಕ್ಕೂ ಮಿಕ್ಕಿವೆ. ಸುತ್ತಮುತ್ತ, ಫ್ಯಾಟ್ ವುಮನ್, ಆಟ, ಗೂಳಿ ಮತ್ತು ಪ್ರತಿಮೆಗಳು ಇತ್ಯಾದಿ ಹಲವು ಸರಣಿಗಳಲ್ಲಿ ಮೂಡಿಬಂದಿವೆ. ಅಂದಾನಿಯವರ ವರ್ಣಚಿತ್ರಗಳ ಮಾತು ಹಾಗಿರಲಿ, ಅವರ ಈ ಒಟ್ಟು ರೇಖಾಚಿತ್ರಗಳನ್ನು ಮಾತ್ರವೇ ವಿಶ್ಲೇಷಿಸಿದರೂ ಸಾಕು ಅವರೊಳಗಿನ ನಿಜವಾದ ಕಲಾವಿದನ ವ್ಯಕ್ತಿತ್ವದ ದರ್ಶನವಾಗುತ್ತದೆ.



ಅಂದಾನಿಯವರು ತಾವು ಹುಟ್ಟಿಬೆಳೆದ ಗ್ರಾಮಪರಿಸರದಲ್ಲಿ ಆಡಿದ ಆಟ-ಪಾಠಗಳು, ಕಂಡು, ಕೇಳಿ ಅನುಭವಿಸಿದ ಹಲವು ದೃಶ್ಯ, ಸಂದರ್ಭ, ಆಚರಣೆಗಳೆಲ್ಲ ಅವರ ಸ್ಮೃತಿಪಟಲದಲ್ಲಿ ಅಚ್ಚೊತ್ತಿ ನಿಂತು ಹರಳುಗೊಂಡ ಅನುಭವಗಳೆಲ್ಲ ಅಭಿವ್ಯಕ್ತಿತೀವ್ರತೆಯಿಂದ ಚಿತ್ರಗಳಾಗಿ ಮೂಡಿ ಬಂದಿವೆ. ಅಂದಾನಿಯವರು ಒಬ್ಬ ಕಲಾವಿದನಾಗಿ ರೂಪುಗೊಳ್ಳಲು ಆರಂಭದಲ್ಲಿ ಅವರ ತಂದೆಯ ಕಲಾಸಕ್ತಿ ಮತ್ತು ರೇಖಾಚಿತ್ರಗಳೇ ಮೂಲ ಪ್ರೇರಣೆಯಾಗಿವೆ ಎಂಬುದನ್ನು ಗುರುತಿಸಿದ ಡಾ|| ಪಾಟೀಲ ಪುಟ್ಟಪ್ಪ ಹೀಗೆ ಬರೆಯುತ್ತಾರೆ. "ಕಿರಣಗಿಯ ಕೃಷಿಕ ಕುಟುಂಬದಲ್ಲಿ ಜನ್ಮವೆತ್ತಿ ಬೆಳೆದು ಬಂದ ಅಂದಾನಿಯವರು ಅಂಬೆಗಾಲು ಇಡುತ್ತಲೇ ನೆಲದ ಮೇಲೆ ಗೆರೆಗಳನ್ನು ಬರೆದಿದ್ದಾರೆ. ತಂದೆ ಬರೆದ ಗೆರೆಗಳನ್ನು ನೋಡಿ ತಮ್ಮ ಕಣ್ಣುಗಳನ್ನು ತುಂಬಿಕೊಂಡಿದ್ದಾರೆ. ಅವರ ತಂದೆ ಕೃಷಿಕನಾದರೂ ಅವನಿಗೆ ಕಲೆಯ ಕಡೆಗೆ ಒಲವು ಇದ್ದಿತು. ಅವರು ಅಭಿಜಾತ ಕಲಾವಿದ. ಮನೆಯ ಗೋಡೆಗಳ ಮೇಲೆ ಅವನು ತನಗೆ ತಿಳಿದ ಚಿತ್ರಗಳನ್ನು ರೇಖಿಸುತ್ತಿದ್ದ. ಬಾಲಕ ಅಂದಾನಿಯ ಮನಸ್ಸಿನ ಮೇಲೆ ಅದು ಅಚ್ಚಳಿಯದ ಪ್ರಭಾವ ಬೀರಿತು. ಹನ್ನೊಂದು ವರ್ಷ ಆದಾಗ ತಂದೆ ತೀರಿಹೋದರೂ ಅವರು ಹಚ್ಚಿದ ಗೀಳು ಮಾತ್ರ ಮಗನನ್ನು ಬಿಟ್ಟುಹೋಗಲಿಲ್ಲ. ವರ್ಷಗಳು ಬೆಳೆದಂತೆ ಅಂದಾನಿಯವರ ಕಲಾಭಿಜ್ಞತೆಯೂ ಬೆಳೆದುಕೊಂಡಿತು". ಹೀಗೆ ಮನೆಯ ವಾತಾವರಣ ಕಲಾಭಿರುಚಿಯುಳ್ಳ ತಂದೆಯ ಪ್ರಭಾವ ಮತ್ತು ಗ್ರಾಮದ ಸ್ವಚ್ಛಂದ ಪರಿಸರಗಳೇ ಇಂದು ಅವರೊಬ್ಬ ಕಲಾವಿದನಾಗಿ ಬೆಳೆಯಲು ಕಾರಣವಾಗಿವೆ ಎಂಬುದಕ್ಕೆ ಅವರ ರೇಖಾಚಿತ್ರಗಳು ಸಾಕ್ಷಿಯನ್ನೊದಗಿಸುತ್ತದೆ. ತಮ್ಮ ಬಾಲ್ಯ, ಯೌವ್ವನ ಅನಂತರದ ಅವಸ್ಥೆಯ ಕೊಂಡಿಯಾಗಿ ಉಳಿಯಬಲ್ಲ ನೆನಪಿನಾಳದ ಅನುಭವಗಳನ್ನು ಇತರ ಮಾಧ್ಯಮಗಳಿಗಿಂತಲೂ ಸಶಕ್ತವಾಗಿ ರೇಖಾಮಾಧ್ಯಮದಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಹೀಗಾಗಿ ಅವರ ರೇಖೆಗಳಲ್ಲಿನ ಅಭಿವ್ಯಕ್ತಿ ಸಾಮರ್ಥ್ಯ ಅಪರಿಮಿತಿವಾಗಿ ತೋರುತ್ತದೆ. ಖ್ಯಾತ ಸಾಹಿತಿ 'ಬೀಚಿಯವರು ಗೀಚಿದ್ದೆಲ್ಲ ಹಾಸ್ಯ' ಎಂಬ ಮಾತಿನಂತೆ 'ಅಂದಾನಿಯವರು ಗೀಚಿದ್ದೆಲ್ಲ ರೇಖಾಚಿತ್ರಗಳು' ಎಂದರೆ ಅನ್ವರ್ಥಕವಾದ ಮಾತೇ ಆಗುತ್ತದೆ. ಇವರ 'ಫ್ಯಾಟ್ ವುಮನ್' ಮಾಲೆಯ ರೇಖಾಚಿತ್ರಗಳಲ್ಲಿ ಸ್ಥೂಲಕಾಯದ ಮಧ್ಯವಯಸ್ಕ ಹೆಣ್ಣುಗಳನ್ನು ಕಾಣುತ್ತಲೇ ಎಂತಹವರಲ್ಲೂ ನಗೆಯುಬುಗ್ಗೆ ಏಳುತ್ತದೆ. ಏಕೆಂದರೆ ಕಲಾವಿದರನೇಕರು ಸುಂದರ, ಸಪೂರದೇಹದ ಸ್ತ್ರೀಯರನ್ನೇ ತಮ್ಮ ಚಿತ್ರಗಳಿಗೆ ವಸ್ತು ಅಥವಾ ರೂಪದರ್ಶಿಗಳನ್ನಾಗಿಸಿಕೊಂಡಿರುವುದನ್ನು ಕಾಣುತ್ತೇವೆ. ಆದರೆ ಅಂದಾನಿಯವರು ಮಾತ್ರ ಎಲ್ಲರ ವಿನೋದದ ವಸ್ತುವಾಗಿರುವಂತಹ ದುಂಡಗಿನ, ದಪ್ಪದೇಹದ ಹೆಂಗಸರ ಬಗೆಗೇ ವಿಶೇಷ ಆಸಕ್ತಿ ತೋರಿ ಚಿತ್ರಿಸಿದ್ದಾರೆ. ಅವರಲ್ಲೇ ತಾವು ಸೌಂದರ್ಯವನ್ನು ಕಂಡು

---

೨೪. ಆರಂಭದಲ್ಲಿ ಅಂದಾನಿಯವರು ಅಲಮೇಲಕರ ಹಾಗೂ ಲಕ್ಷ್ಮಗೌಡ ಅವರ ರೇಖಾಚಿತ್ರಗಳಿಂದ ಪ್ರಭಾವಿತರಾಗಿದ್ದಾರೆ.





ಇತರರೂ ಆಸ್ವಾದಿಸುವಂತೆ ಮಾಡಿದ್ದಾರೆ. ಭಾರತೀಯ ಶಿಲ್ಪ ಪರಂಪರೆಯಲ್ಲಿ ಹೆಣ್ಣುಗಳ ಮುಖ, ಸ್ತನ, ನಿತಂಬ, ಜಘನ ಮುಂತಾದ ಅವಯವಗಳು ದುಂಡು ದುಂಡಾಗಿ ಇರುವಂತೆ ಶಿಲ್ಪಿಸಲಾಗಿದೆ. ಇವುಗಳೇ ಅಂದು ಸ್ತ್ರೀ ಸೌಂದರ್ಯದ ಮಾನದಂಡಗಳೂ ಆಗಿದ್ದವು. ಅಂದಾನಿಯವರು ದುಂಡಗಿನ ಹೆಣ್ಣುಗಳನ್ನು ಕಂಡಾಗ ಈ ಪರಂಪರೆಯ ಪ್ರಜ್ಞೆ ಜಾಗೃತಗೊಂಡು ಚಿತ್ರಿಸಲು ಪ್ರೇರಣೆನೀಡಿರಲಿಕ್ಕೆ ಸಾಧ್ಯವಿದೆ. ಆಟ ಮಾಲಿಕೆಯ ರೇಖಾಚಿತ್ರಗಳಂತೂ ಬಾಲ್ಯದಲ್ಲಿ ಆಡಿದ ಕಬ್ಬಡ್ಡಿ, ಕಣ್ಣುಮುಚ್ಚಾಲೆ, ಗಿಡಮಂಗ್ಯ (ಮರಹತ್ತುವುದು) ಮುಂತಾದ ಗ್ರಾಮೀಣ ಮಕ್ಕಳಾಟಗಳ ಚಿತ್ರಗಳಾಗಿದ್ದು ಮುದ್ದುಬರುವಂತೆ ಮೂಡಿಬಂದಿವೆ. ರೇಖೆಗಳ ಗತಿ, ಲಯ, ಆಕೃತಿಗಳ ಸಂಯೋಜನೆ ನೋಡುಗರನ್ನು ಮೋಡಿ ಮಾಡುತ್ತವೆ.

ಅಂದಾನಿಯವರ ರೇಖಾಚಿತ್ರಗಳ ಕುರಿತು ಕಲಾವಿಮರ್ಶಕ ಕೆ.ವಿ. ಸುಬ್ರಹ್ಮಣ್ಯಂ[೨೫] ಅವರು ಮನದುಂಬಿ ಬರೆದಿದ್ದಾರೆ. ಅವರ ಅಭಿಪ್ರಾಯದಂತೆ ಅಂದಾನಿಯವರ ರೇಖಾಚಿತ್ರಗಳು ೧೯೮೦-೯೦ರ ದಶಕದಲ್ಲಿ ದುಂಡನೆಯ ರೇಖಾರೂಪಗಳು, ಅವುಗಳ ವಿಕೃತಿ (Distortion) ನಮ್ಮ ಕಲಾ ಇತಿಹಾಸದ ದಿಗ್ಗಜಗಳ ನೆನಪು ಕಾಡುವಂತೆ ಕಾಣಿಸಿಕೊಂಡವಾದರೂ ಬದುಕಿನ ದ್ವಂದ್ವ, ದ್ವಿ-ತ್ರಿ-ಮುಖಗಳ ಮಾನವ, ಪ್ರಾಣಿ, ಪಕ್ಷಿ, ಸಸ್ಯ ರೂಪಗಳು, ಅವುಗಳ ಒಳನೋಟಗಳ ಗ್ರಹಿಕೆಗಳು ಅಂದಾನಿಯವರ ಸ್ಥೂಲಪ್ರಜ್ಞೆಯನ್ನು ಬಿಂಬಿಸುತ್ತವೆ. ಕೆಲವೊಮ್ಮೆ ಕೇವಲ ಹೊರರೇಖಾ ಅಂಚುಗಳ ಸಂಪೂರ್ಣ ರೂಪಗಳನ್ನು, ಕೆಲವೊಮ್ಮೆ ಅವಕಾಶದಲ್ಲಿ ಗುರುತ್ವ ಮೀರಿ ತೇಲುವಂತಹ ಭ್ರಮೆಯ ದೃಶ್ಯಕಲ್ಪನೆಗಳು, ಗಂಡುಹೆಣ್ಣಿನ ಸಂಬಂಧಗಳ ನಡುವೆ ಸಾಕುಪ್ರಾಣಿಗಳು ಮಾನವೀಯ ಭಾವನೆಗಳು ಆಕರ್ಷಕವಾಗಿ ರೂಪಿಸಲ್ಪಟ್ಟಿವೆ. ಇವೆಲ್ಲಾ ವಿಡಂಬನೆ, ನೋವುಗಳಿಗಿಂತ ಬದುಕನ್ನು ಗಂಭೀರವಾಗಿ ಗ್ರಹಿಸಿದ ಸ್ಥಿತಿಯಿದೆ. ೧೯೯೦ರ ನಂತರದ ರೇಖಾ ಚಿತ್ರಗಳು ನಿಜವಾದ ರೀತಿಯಲ್ಲಿ ಸಮಕಾಲೀನ ಸಂವೇದನೆಯನ್ನು ಲೇಪಿಸಿಕೊಂಡು ಮೂಡಿಬಂದಿವೆ. ಡೆವಿಡ್ ಹಾಕ್ನಿ, ತಯಾಬ್ ಮೆಹತಾ ಅವರ ರೇಖಾರೂಪಗಳ ಪ್ರಭಾವಗಳನ್ನು ಮೀರಿದ 'ವಿಲ್ ಟು ಫಾರ್ಮ್' ದೃಷ್ಟಿಯಿಂದ, ಒತ್ತಡದ ಕಾರಣದಿಂದಾಗಿ ಇವರ ಈ ರೇಖಾಚಿತ್ರಗಳು ಮೂಡಿಬಂದಿವೆ. ಈ ದೃಷ್ಟಿಯಿಂದ ಇವರ ಅಭಿವ್ಯಕ್ತಿ ತೀವ್ರತೆಗೆ ೧೯೯೨ರ ರೇಖಾ ಚಿತ್ರಗಳ ಅನುಭವಗಳು ತೀವ್ರವಾಗಿ ತಟ್ಟುತ್ತವೆ. ಬಹುಕಾಲ ಕಾಡುತ್ತವೆ. ಈ ಕೆಲವು ಕೃತಿಗಳಲ್ಲಿ ಪೂರ್ಣಗೊಳಿಸಿದ ರೇಖಾರೂಪಗಳ ಅತ್ತಿತ್ತ ಕಪ್ಪುಬಣ್ಣವನ್ನು ಕೆಲವೆಡೆ ದಟ್ಟವಾಗಿ, ಕೆಲವೆಡೆ ತೆಳುವಾಗಿ ಬಳಿಯಲಾಗಿದೆ. ಅಪರೂಪಕ್ಕೆ ಕೆಲವು ಕೃತಿಗಳಲ್ಲಿ ಕಪ್ಪು ಇಂಡಿಯನ್ ಇಂಕ್ ಒದ್ದೆಅವಕಾಶದಲ್ಲಿ ಕಣಕಣವಾಗಿ ಆವರಿಸಿಕೊಂಡಿದೆ. ಇವೆಲ್ಲವುಗಳ ನಡುವೆ ಅಸ್ಪಷ್ಟತೆಯ ಮುಸುಕು ಹೊದ್ದ ಕೃತಿಗಳಲ್ಲಿ ರೇಖಾರೂಪಗಳು ಅಪೂರ್ಣ ರೇಖೆಗಳಲ್ಲಿ ತಮ್ಮನ್ನು ತಾವೇ ಹುಡುಕಿಕೊಂಡಿವೆ. ಸುಂದರವಾಗಿ ಮೂಡಿವೆ. ಸಮಕಾಲೀನ ಬದುಕಿನ ವಿಕೃತ, ಅಸ್ಪಷ್ಟ ಸಂಬಂಧಗಳು ಸಮರ್ಥವಾಗಿ ಅಭಿವ್ಯಕ್ತಗೊಂಡಿವೆ.

೨೫. ನೋಡಿ; ಕಲಾಸಂವೇದನೆಯ ಒಳನೋಟಗಳು: ಕೆ.ವಿ. ಸುಬ್ರಹ್ಮಣ್ಯಂ (ಮೂಲ ವಾಕ್ಯಗಳನ್ನು ಸಂಗ್ರಹಿಸಿ ಇಲ್ಲಿ ಹೇಳಲಾಗಿದೆ).

ಅಂದಾನಿಯವರ ವರ್ಣಚಿತ್ರಗಳಲ್ಲಿನ ಹಾಗೆ ಅವರ ರೇಖಾಚಿತ್ರಗಳಲ್ಲೂ ಗೂಳಿ ಕಾಣಿಸಿಕೊಂಡಿದೆ. ಮಹಾಪುರುಷರ ಪ್ರತಿಮೆಗಳೊಂದಿಗೆ[೨೬], ಶಾಂತಿ, ಸೌಹಾರ್ದದ ಪ್ರತೀಕವಾಗಿರುವ ಪ್ರತಿಮೆಗಳು ದೇಶದಲ್ಲಿ ಆಗಾಗ ಶಾಂತಿಯನ್ನು ಕದಡುವುದಕ್ಕೂ ಕಾರಣವಾದದ್ದುಂಟು. ಈ ವಸ್ತುವೂ ಇವರ ರೇಖಾಚಿತ್ರಗಳಿಗೆ ಸ್ಫೂರ್ತಿ ನೀಡಿದೆ. ಕುಸಿದಮೌಲ್ಯಗಳ ಬಗೆಗಿನ ಆತಂಕ, ವಿಷಾದ ಇವುಗಳಲ್ಲಿ ವ್ಯಕ್ತವಾಗುತ್ತವಲ್ಲದೆ ಪ್ರತಿಮಾ ಸಂಸ್ಕೃತಿಯನ್ನು ಪ್ರಶ್ನೆ ಮಾಡುತ್ತಲೇ ಅನನ್ಯತೆಯನ್ನು ಸಾಧಿಸಿವೆ. ಈ ಚಿತ್ರಗಳಲ್ಲಿ ಈ ಹಿಂದಿನ ಚಿತ್ರಗಳಿಗಿಂತಲೂ ಬೇರೆಯಾದ ಕೆಲವು ಗುಣಗಳಿವೆ. ರೇಖೆಗಳನ್ನು ಪ್ರಜ್ಞಾಪೂರ್ವಕವಾಗಿ ಎಳೆಯಲಾಗಿದೆ. ಈ ರೇಖೆಗಳು ಆಯಾ ಸಂದರ್ಭಕ್ಕೆ ವಿಶಿಷ್ಟವಾಗಿ ಎದ್ದುಕಾಣುವ ರೀತಿಯಲ್ಲಿ ಭಾವನೆಗಳನ್ನು ಪ್ರಕಟಿಸಿವೆ. ರೇಖಾ ಕೌಶಲವಿಲ್ಲದ ವರ್ಣಚಿತ್ರ ಕಷ್ಟಸಾಧ್ಯವಾಗಬಹುದು. ಆದರೆ ವರ್ಣಲೇಪವಿಲ್ಲದ ಶುದ್ಧ ರೇಖಾಚಿತ್ರ ಸಾಧ್ಯವೆಂಬ ಅಂಶ ಈ ರೇಖಾಚಿತ್ರಗಳಲ್ಲಿ ಸಾಕಾರಗೊಂಡಿದೆ. 'ರೇಖೆಗಳು ಅನುಕರಣದ ಪರಿಣಾಮ ಅಲ್ಲ, ಇವು ಹೊಸ ಸೃಷ್ಟಿ' ಎಂಬ ಹೆಬ್ಬಾರರ ಮಾತಿನಂತೆ ರೇಖೆಗಳನ್ನು ಪ್ರಯೋಗಕ್ಕೆ ಒಳಗುಪಡಿಸಿ ಅವುಗಳಲ್ಲಿನ ಹೊಸ ಸಾಧ್ಯತೆಗಳನ್ನು ಬಯಲಿಗೆಳೆಯುವುದರ ಮೂಲಕ ರೇಖೆಗಳಲ್ಲಿ ಒಂದು ಬಗೆಯ ಹೊಸ ಆಯಾಮವನ್ನೇ ಅಂದಾನಿಯರರು ತಂದುಕೊಂಡಿದ್ದಾರೆ. 'ಕಿರಿದರೋಳ್ ಪಿರಿದಪ್ಪ ವಿಷಯಮಂ ಪೇಳ್ದನ್' ಎಂಬಂತೆ ಆದಷ್ಟು ಕಡಿಮೆ ರೇಖೆಗಳಲ್ಲಿ ಹೆಚ್ಚಿನ ಅರ್ಥವನ್ನು ಸ್ಫುರಿಸುವಂತೆ ಮಾಡುವ ಉದ್ದೇಶ ಇಲ್ಲಿ ಕಂಡುಬಂದಿದೆ. ಜೊತೆಗೆ ತಮ್ಮದೇ ಆದ ಛಾಪನ್ನು ಮೂಡಿಸುವ ಛಲವೂ ವ್ಯಕ್ತವಾಗಿದೆ. ಮತ್ತು ಇಲ್ಲಿ ಅಂದಾನಿಯವರ ಸಾಮಾಜಿಕ ದೃಷ್ಟಿಯೂ ತೆರೆದುಕೊಂಡಿದೆ[೨೭]. ಇತ್ತೀಚಿಗೆ ಅಂದಾನಿಯವರ ರೇಖಾಚಿತ್ರಗಳ ಸಂಗ್ರಹ "ಬಯಲು ಬಯಲಾದ ರೇಖೆಗಳು" ಹೊರಬಂದಿದೆ.

## ಬಿಸಿಲ ನೆರಳಿನಲ್ಲಿ ಚರ್ಚೆ

ಕಲಾವಿದನೊಬ್ಬ ವಾಸಿಸುತ್ತಿರುವ ಪ್ರದೇಶ, ಸಮಕಾಲೀನ ಪರಿಸರ ಮತ್ತು ಸನ್ನಿವೇಶಗಳು ಆತನ ಮೇಲೆ ಗಾಢವಾದ ಪ್ರಭಾವ ಬೀರಿರುತ್ತವೆ ಎಂಬ ಸಾಮಾನ್ಯವಾದ ನಂಬಿಕೆಯೊಂದಿದೆ[೨೮]. ಈ ನಂಬಿಕೆಗೆ ಅಂದಾನಿಯವರ 'ಬಿಸಿಲ ನೆರಳಿನಲ್ಲಿ ಚರ್ಚೆ' ಸರಣಿ ಕಲಾಕೃತಿಗಳು ನಿದರ್ಶನ. ಅವರು ವಾಸವಾಗಿರುವುದು ಕಲಬುರ್ಗಿ ಪ್ರದೇಶ. ಕಲಬುರ್ಗಿ ಎಂದರೆ ಬಿಸಿಲೇ ಬಿಸಿಲು. ಈ ಬಿಸಿಲಿಗೆ ಕಾಲವೂ ಬೆವರುತ್ತದೆ.

ಈ 'ಬಿಸಿಲ ನಾಡಿನ ಸಂಜೆ ಮತ್ತು ಮುಂಜಾವುಗಳು ಬಹು ಸೊಗಸಾಗಿರುತ್ತವೆ' ಎಂಬ ಉರ್ದುಕವಿಯೋರ್ವನ ಮಾತುಗಳನ್ನು ನೆನೆಪಿಸಿಕೊಳ್ಳುವ ಅಂದಾನಿಯವರು, ತಮ್ಮ ಚಿತ್ರಗಳಲ್ಲೂ ಇವುಗಳ ಸೊಗಸುತನವನ್ನು ದಾಖಲಿಸದೇ ಇಲ್ಲ. ಕವಿಯ ಮಾತಿನಂತೆ ಇಲ್ಲಿನ ಸಂಜೆ, ಮುಂಜಾವುಗಳಷ್ಟೇ ಸೊಗಸು ಹಿತಕರ. ಆದರೆ ಈ ಬಿರುಬಿಸಿಲಿನ





ಬಿಸಿಲ ನೆರಳಿನಲ್ಲಿ ಚರ್ಚೆ / Gossip under the Sun's shadow

೨೬. ಅಂದಾನಿಯವರಿಗೆ ಗಾಂಧಿ ಮತ್ತು ಲೆನಿನ್ ಅವರುಗಳ ಬಗ್ಗೆ ವಿಶೇಷ ಗೌರವ. ಹೀಗಾಗಿ ಅವರ ಪ್ರತಿಮೆಗಳನ್ನನುಸರಿಸಿ ಸಾಕಷ್ಟು ಚಿತ್ರಗಳನ್ನು ಬರೆದಿದ್ದಾರೆ.

೨೭. ನೋಡಿ; 'ಸಂಕುಲ'; ಸಂಚಿಕೆ-೨೨ ಮತ್ತು ೨೭ ಡಾ|| ವಿಜಯಾ; (ಸಂ).

೨೮. ನೋಡಿ; 'ಸೌಭಾಗ್ಯ' (ಎ.ಎಸ್. ಪಾಟೀಲ ಜೀವನ ಚರಿತ್ರೆ); ಡಾ|| ಶಿವಾನಂದ ಎಚ್. ಬಂಟನೂರ



ನಡುಹಗಲು ಯಾರಿಗೆ ಪ್ರಿಯ? ಆ ಬಿರುಬಿಸಿಲನ್ನು, ಅದರ ಪ್ರಖರತೆಯನ್ನು ಬಣ್ಣದೊಂದಿಗೆ ಕ್ಯಾನ್ವಾಸ್‌ಗೆ ಇಳಿಸಿದ್ದಾರೆ-ಅಂದಾನಿ. ಇಲ್ಲಿನ ಬಿಸಿಲು ಮತ್ತು ಬದುಕು ಒಂದನ್ನು ಬಿಟ್ಟು ಒಂದು ಇಲ್ಲ. ಇಲ್ಲಿರುವ ಕಲ್ಲು, ಮಣ್ಣು, ಮನೆ, ಮನ ಎಲ್ಲವೂ ಬಿಸಿಲುಂಡವುಗಳೇ. ಇಲ್ಲಿ ಬದುಕುವುದೆಂದರೆ, ಬದುಕಬೇಕೆಂದರೆ ಮೈಮನಗಳೆರಡೂ ಬಿಸಿಲುಣ್ಣಬೇಕು. ಬಿರುಬಿಸಿಲಿಗೆ ಬಸವಳಿದರೂ ಈ ಭಾಗದ ಬದುಕು ಹೆಚ್ಚೆಚ್ಚು ಸತ್ವಯುತಗೊಂಡು ಬದುಕಿದೆ. ಬಿಸಿಲಿನ ನೆರಳಿನಲ್ಲಿ, ಬದುಕಿನ ಬಿಸಿಯ ಏರಿಳಿತಗಳನ್ನು ಚರ್ಚಿಸುತ್ತ, ಬದುಕುವ ಯೋಚನೆಯಲ್ಲಿ ಬದುಕನ್ನು ಸವೆಸುತ್ತ ಬದುಕಿದೆ.

ಇಲ್ಲಿನ ಸೂರ್ಯ ಅಸಂಖ್ಯ ಬಣ್ಣಗಳನ್ನು ತನ್ನ ಗರ್ಭದಲ್ಲಿರಿಸಿಕೊಂಡೂ ಪ್ರಖರ ಬಣ್ಣಗಳ ಬಿಸಿಲನ್ನಷ್ಟೇ ಸುರಿವ ಪರಿಯಲ್ಲೇ ಆತನ ಬಣ್ಣ ಬಯಲಾಗಿದೆ; ಅಂದಾನಿಯರ ತಣ್ಣಗಿನ ಬಣ್ಣಗಳಲ್ಲಿ. ಅವರ ಈ ಹಿಂದಿನ ಸರಣಿ ಕಲಾಕೃತಿಗಳಲ್ಲಿ ಬಳಕೆಗೊಂಡ ರೇಖಾರೂಪಗಳು, ಮಾನವಾಕೃತಿಗಳು ಈ ಕಲಾಕೃತಿಗಳಲ್ಲೂ ಕಾಣಿಸಿಕೊಂಡಿವೆ. ವಿಶೇಷವಾಗಿ ಬಾಲಕ, ಬಾಲಕಿಯರು ಮತ್ತು ಯುವತಿಯರ ರೂಪಗಳೇ ಪ್ರಧಾನ. ಗೂಳಿ, ಕುದುರೆ ಹಾಗೂ ಪ್ರತಿಮೆಗಳೂ ಅಲ್ಲಲ್ಲಿ ಬೆರೆತು ಚಿತ್ರಣಗೊಂಡಿವೆ. ಇವು ಇವರ ಈ ಮೊದಲಿನ ಆಟ, ಸುತ್ತಮುತ್ತ ಚಿತ್ರಸರಣಿಗಳನ್ನು ನೆನಪಿಗೆ ತರುತ್ತವೆ. ಆದರೆ ವಸ್ತು, ಆಶಯ, ಸಂಯೋಜನಾ ಕ್ರಮ ಮತ್ತು ವರ್ಣವಿನ್ಯಾಸಗಳು, ಕುಂಚದ ಬೀಸುಗಳು ಸರಿದಾಟ-ಹರಿದಾಟಗಳು ಹೊಸತನದಿಂದ ಕೂಡಿವೆ. ಬಳಸಿದ ಬಿಳಿ ಮತ್ತು ಪ್ರಖರ ವರ್ಣಗಳು ಬಿಸಿಲನ್ನು ಸಂಕೇತಿಸಿದರೆ, ನೀಲಿ, ಕಂದು ಬಣ್ಣಗಳು ನೆರಳನ್ನು ಪ್ರತಿನಿಧಿಸಿವೆ.

ತೀರ ಇತ್ತೀಚಿನ ಕೃತಿಗಳಾಗಿರುವ ಈ 'ಬಿಸಿಲ ನೆರಳಿನ ಚರ್ಚೆ' ಕೃತಿಸರಣಿ ಅವರ ಇದುವರೆಗಿನ ಹಲವು ಸರಣಿ ಕೃತಿಗಳ ಮೊತ್ತವೆಂಬಂತೆ ತೋರುತ್ತವೆ. ಹೀಗಾಗಿ ಈ ಚಿತ್ರ ಸರಣಿಯನ್ನು ಅವರ ಇದುವರೆಗಿನ ಸೃಷ್ಟಿಯ ಸಾರಸಂಗ್ರಹಿತವಾದ ರೂಪಗಳೆಂದು ಭಾವಿಸಬಹುದು; ಆದರೆ ಒಂದು 'ರೂಪಕ'ವಾಗಿ ಅಲ್ಲ. ಕಲಾವಿದನೊಬ್ಬನ ಮೂರ್ನಾಲ್ಕು ದಶಕಗಳ ಅಭಿವ್ಯಕ್ತಿಯನ್ನು[೨೯] ಕೇವಲ ಆತನ ಕೃತಿಸರಣಿಯೊಂದರ ಮೂಲಕವೇ ಹೀಗೆ ರೂಪಕದೋಪಾದಿಯಲ್ಲಿ ಕಾಣಸಿಗುವುದು ಸೃಜನಶೀಲ ಕಲಾವಲಯದಲ್ಲಿ ತುಂಬ ವಿರಳ.

ಅಂದಾನಿ ಇಂಥ ಜಾಡಿಗೆ ಸೇರದ ಕಲಾವಿದರಲ್ಲಿ ಒಬ್ಬರಾಗುವುದರಿಂದ 'ಬಿಸಿಲ ನೆರಳಿನಲ್ಲಿ ಚರ್ಚೆ' ಸರಣಿಕೃತಿಗಳು ಅವರ ಈ ಹಿಂದಿನ ಕೃತಿ ಸರಣಿಗಳಿಗೆ ಉಪಮೆಯೋಪಾದಿಯಲ್ಲಿ ನಿಲ್ಲುತ್ತವೆ ಎಂದೇ ಹೇಳುವುದು ಹೆಚ್ಚು ಸೂಕ್ತವೆನಿಸುತ್ತದೆ. ಈ ಹೇಳಿಕೆ ಅಂದಾನಿಯವರ ನಿರಂತರ ಪ್ರಯೋಗಶೀಲತೆ ಮತ್ತು ಅಭಿವ್ಯಕ್ತಿ ತೀವ್ರತೆಗೆ ಕನ್ನಡಿ ಹಿಡಿದಂತಾಗುತ್ತದೆ. ಮಾತ್ರವಲ್ಲದೆ ಅವರ ಒಟ್ಟು ಕೃತಿ ಸಮೂಹದ ಸಿಂಹಾವಲೋಕನಕ್ಕೂ ದಾರಿ ಮಾಡಿಕೊಡುತ್ತದೆ.

ಅಂದಾನಿಯವರ ಈಚಿನ (ಬಿಸಿಲ ನೆರಳಿನಲ್ಲಿ ಚರ್ಚೆ) ಕೃತಿ ಸರಣಿಯಾಗಲೀ, ಮತ್ತು ಅವರ ಇತರ ಕೃತಿಗಳು ಅಥವಾ ಕೃತಿಸರಣಿಗಳಾಗಲಿ ಅವುಗಳ ಕುರಿತು ಸೌಂದರ್ಯಶಾಸ್ತ್ರೀಯ, ಮನಶ್ಶಾಸ್ತ್ರೀಯ ಅಥವಾ ಸಮಾಜಶಾಸ್ತ್ರೀಯ ಹೀಗೆ ಬೇರೆ ಬೇರೆ ಆಯಾಮಗಳ ನೆಲೆಯಲ್ಲಿ ವಿಶ್ಲೇಷಣೆ, ವಿಮರ್ಶೆ ಮಾಡಲು ಸಾಧ್ಯವಿದೆ. ಇಲ್ಲಿ ನನಗಿರುವ ಸಮಯ ಮತ್ತು ಅನುಭವಗಳ

೨೯. ಈ ಬಗೆಯ ವಿಶ್ಲೇಷಣೆಗೆ ನೋಡಿ; 'ಕೆ.ಟಿ. ಶಿವಪ್ರಸಾದ' ಎಚ್.ಎ. ಅನಿಲಕುಮಾರ

ಇತಿಮಿತಿಗೊಳಪಟ್ಟು ವಿಶ್ಲೇಷಿಸಿದ್ದೇನೆ. ಮುಖ್ಯವಾಗಿ ಅಂದಾನಿಯವರ ಪ್ರದೇಶನಿಷ್ಠ ತುಡಿತ-ಮಿಡಿತಗಳು, ಮನೋಪ್ರಪಂಚ, ವೈಯಕ್ತಿಕ ಬದುಕು, ಸಾಮಾಜಿಕ ಮತ್ತು ಸಾಂಸ್ಥಿಕ ವಲಯ ಪ್ರೇರಿತ ಉದ್ವೇಗ ಮತ್ತು ಆತಂಕಗಳು, ಯಶಸ್ಸಿನ ಹಿಂದೆ ಅಂಟಿಕೊಂಡು ಬಂದ ಅಹಮಿಕೆಯಂತಹ ಚಿತ್ರವೃತ್ತಿಗಳು ಮುಂತಾಗಿ ಮನಸ್ಸಿನ ಏಕಾಗ್ರತೆಯನ್ನು ಕೆಡಿಸಬಲ್ಲ ವ್ಯಾಪಾರಗಳು, ಇಂಥ ವ್ಯಾಪಾರಗಳ ಹೊಯ್ದಾಟದ ಮಧ್ಯೆಯೂ ಸ್ಥಾಯಿಯಾಗಿ ಉಳಿದುಕೊಂಡು ಬಂದಿದ್ದು ಅವರ 'ಸೃಜನಶೀಲ' ಸೃಷ್ಟಿಕ್ರಿಯೆ. ಇಂಥ ಅಂಶಗಳ ಕಡೆಗೆ ಪರೋಕ್ಷವಾಗಿ ನನ್ನ ಗಮನ ಕೇಂದ್ರೀಕರಿಸುವುದಾಗಿದೆ.



ಅಂದಾನಿಯವರ ಕನಸು ನನಸಾಗಿಸಿದ ದಿ ಐಡಿಯಲ್ ಫೈನ್ ಆರ್ಟ್ಸ್ ಸಂಸ್ಥೆ ಇಂದು ಕಪ್ಪುಕಲ್ಲಿನ ಸುಂದರ ವಾಸ್ತುಶಿಲ್ಪ, ಮನೆಯೂ ಕೂಡ. ಕಲಬುರ್ಗಿಯ ಹೃದಯ ಭಾಗದಲ್ಲಿರುವ ಉದ್ಯಾನವನದ ಉತ್ತರದಂಚಿನಲ್ಲಿ ಅಪ್ಪನ ಕೆರೆಗೆ ಅಂಟಿಕೊಂಡು ಸಂಸ್ಥೆಯಿದ್ದರೆ (ಕಲಾನಿಕೇತನ), ಪಶ್ಚಿಮದಂಚಿನಲ್ಲಿ ಮನೆ ನೀಲಾಂಗಳ, ಮಡದಿ ಶ್ರೀಮತಿ ಶಾಂತಾಬಾಯಿ, ಮಕ್ಕಳು ಮತ್ತು ಮನೆಯ ಆಗುಹೋಗುಗಳ ಜವಾಬ್ದಾರಿ ಹೊತ್ತವರು. ಕಲಾನಿಕೇತನದಲ್ಲಿ ಉಪನ್ಯಾಸಕನಾಗಿರುವ ಮಗ ಗೌತಮ, ವೈದ್ಯಕೀಯ ಓದುತ್ತಿರುವ ಮಗಳು ಶ್ರೀಮತಿ ಶಿಲ್ಪಾ ಕಲಾವಿದೆಯಾಗಿಯೂ ರೂಪಗೊಳ್ಳುತ್ತಿರುವವಳು. ಕಾಲೇಜು ಓದುತ್ತಿರುವ ಗೌರೀಶ ಇನ್ನೊಬ್ಬ ಮಗ. ಮೊಮ್ಮಗ 'ಆದರ್ಶ' ವಂಶದ ಕುಡಿ. ಇಷ್ಟು ಅಂದಾನಿಯವರ ಚಿಕ್ಕಚೊಕ್ಕ ಕುಟುಂಬ.

ಐದೂವರೆ ಅಡಿ ಎತ್ತರದ ಅಂದಾನಿಯವರದು ದುಂಡಗಿನ ಮುಖ, ತುಂಬಿದ ಕೆನ್ನೆಗಳು, ಕಪ್ಪು ಬಣ್ಣ, ನಗೆ ತುಂಬಿದ ಕಣ್ಣುಗಳು, ಕೆಲಸದಲ್ಲಿ ಏಕಾಗ್ರತೆ, ನೇರ ಹಾಗೂ ಹಿತಮಿತ ಮಾತು, ಪಾದರಸದಂತೆ ಸದಾ ಚಟುವಟಿಕೆ, ಅವಸರದ ನಡಿಗೆ, ನೀಟಾದ ಉಡುಪು. ಇದು ಅಂದಾನಿಯವರ ಬಾಹ್ಯಗೋಚರ ವ್ಯಕ್ತಿತ್ವ. ಈ ವ್ಯಕ್ತಿತ್ವದ ಪ್ರಭಾವದಡಿಯಲ್ಲಿ ಕಲಿತು ಇಂದು ನಾಡಿನಲ್ಲಿ ಹೆಸರಾದವರು ಅನೇಕರು. ಬಸವರಾಜ ಬುಳ್ಳಾ, ವಿಜಯ ಹಾಗರಗುಂಡಗಿ, ವಿಜಯ ಬಾಗೋಡಿ, ಬಸವರಾಜ ಮುಸಾವಳಗಿ, ಬಸವರಾಜ ಜಾನೆ, ಸೀತನೂರ ಮೋಹನ, ಅಮರಮ್ಮ ಪಾಟೀಲ, ರಾಜಶೇಖರ ಎಸ್, ಪೂರ್ಣಿಮಾ ಪಾಟೀಲ, ಪ್ರಕಾಶ ಗಡಕರ, ಬಿಂದುರಾಯ ಬಿರಾದಾರ, ಮಲ್ಲಿಕಾರ್ಜುನ ಶೆಟ್ಟಿ, ಚಂದ್ರಹಾಸ ಜಾಲಿಹಾಳ, ವೀರೇಂದ್ರ ಶಹಾ, ವೀರಣ್ಣ ರುಕುಮಪೂರ, ಎಚ್.ವಿ. ಮಂತಟ್ಟಿ, ಶಶಿಕಾಂತ ಮಾಶಾಳಕರ, ಚಂದ್ರಶೇಖರ, ಎಚ್. ಲೋಕಯ್ಯ, ಮಠಪತಿ, ರವೀಂದ್ರ ಕಮ್ಮಾರ, ಸುಭಾಷ್ ಕಮ್ಮಾರ, ಪಿ.ಬಿ. ಕುರ್ಚಗಿ, ಪಿ.ಬಿ. ಹರಸೂರ, ದೊಡ್ಡಮನಿ, ಅಂಬಾರಾಯ, ಅಮೃತ ಸಾಹು, ರಾಮಗಿರಿ ಪೋಲೀಸ್ ಪಾಟೀಲ, ಕಿಶೋರ, ಭಜಂತ್ರಿ, ನಾಗೂರ, ಚಿನಮಳ್ಳಿ ಹೀಗೆ ಅನೇಕ ಕಲಾವಿದರ ಪಟ್ಟಿ ಬೆಳೆಯುತ್ತದೆ.

## ಪ್ರೊ॥ ವ್ಹಿ.ಜಿ. ಅಂದಾನಿ ಅವರ ಸಂಕ್ಷಿಪ್ತ ಪರಿಚಯ

| | |
|---|---|
| ೧೯೪೭ | ಜನನ, ಹೊನ್ನಕಿರಣಗಿ, ಕಲಬುರ್ಗಿ ಜಿಲ್ಲೆ |
| ೧೯೬೯ | ಐಡಿಯಲ್ ಕಲಾ ಶಾಲೆಯಿಂದ ಡಿಪ್ಲೊಮ ಪದವಿ |
| ೧೯೭೦-೯೦ | ಐಡಿಯಲ್ ಕಲಾ ಶಾಲೆಯ ಪ್ರಾಂಶುಪಾಲಕ |
| ೧೯೮೫ | ಸ್ನಾತಕೋತ್ತರ ಪದವಿಯ ಕಾಲೇಜ್ ಆಫ್ ಫೈನ್ ಆರ್ಟ್‌ನ ಸ್ಥಾಪಕ ಪ್ರಾಂಶುಪಾಲಕ |
| ೧೯೭೮-೮೭ | ನಾಲ್ಕು ಅವಧಿಗೆ ರಾಜ್ಯ ಲಲಿತಕಲಾ ಅಕಾಡೆಮಿಯ ಸದಸ್ಯ |
| ೧೯೮೮-೯೨ | ಕೇಂದ್ರ ಲಲಿತಕಲಾ ಅಕಾಡೆಮಿಯ ಸದಸ್ಯ |
| ೧೯೯೦ | INTACHನ ಸದಸ್ಯ |
| ೧೯೯೪-೯೭ | ಅಧ್ಯಕ್ಷರು, ರಾಜ್ಯ ಲಲಿತಕಲಾ ಅಕಾಡೆಮಿ |
| ೧೯೬೯-೨೦೦೪ | ೫೫ಕ್ಕೂ ಹೆಚ್ಚು ಗುಂಪು ಹಾಗೂ ಏಕವ್ಯಕ್ತಿ ಪ್ರದರ್ಶನಗಳಲ್ಲಿ ಭಾಗವಹಿಸಿರುವಿಕೆ |
| ೧೯೭೬-೨೦೦೪ | ಸುಮಾರು ೨೫ ಕಲಾ ಶಿಬಿರಗಳಲ್ಲಿ ಕೃತಿರಚನೆ |

೧೯೬೩ರಲ್ಲಿ ಇಲ್ಲಸ್ಟ್ರೇಟೆಡ್ ವೀಕ್ಲಿಯ ಪ್ರಶಸ್ತಿ ಸೇರಿದಂತೆ ಚಿತ್ರ ಕಲಾ ಪರಿಷತ್ ಕೇಂದ್ರ ಹಾಗೂ ರಾಜ್ಯ ಲಲಿತಕಲಾ ಅಕಾಡೆಮಿಯ ಪ್ರದರ್ಶನಗಳಲ್ಲಿ ಹಾಗೂ ದೆಹಲಿ ಧಾರವಾಡಗಳಲ್ಲಿಯ ಸಂಘ ಸಂಸ್ಥೆಗಳಿಂದ ಮತ್ತು ರಾಜ್ಯ ಲಲಿತಕಲಾ ಅಕಾಡೆಮಿಯಿಂದ ರಾಜ್ಯ ಪ್ರಶಸ್ತಿಗಳು.

ರಾಜ್ಯ, ಕೇಂದ್ರ ಹಾಗೂ ವಲಯ ಅಕಾಡೆಮಿಗಳ ಕಾರ್ಯಕ್ರಮಗಳಲ್ಲದೆ, ರಷ್ಯಾ, ಇಂಗ್ಲೆಂಡ್, ಜರ್ಮನಿ, ಸ್ಪೇನ್ ದೇಶಗಳಲ್ಲಿಯ ಕಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿರುವಿಕೆ.

ರಾಜ್ಯ, ರಾಷ್ಟ್ರಗಳಲ್ಲದೆ ಅಮೆರಿಕಾ, ಯೂರೋಪ್ ದೇಶಗಳಲ್ಲೂ ಶ್ರೀಯುತರ ಕೃತಿಗಳ ಸಂಗ್ರಹವಿದೆ.

ರಾಜ್ಯ, ಕೇಂದ್ರ, ವಲಯ ಅಕಾಡೆಮಿಗಳ ಹಾಗೂ ಇನ್ನಿತರ ಅನೇಕ ಕಲಾಶಿಬಿರಗಳ ವಿಚಾರ ಸಂಕಿರಣಗಳ ನಿರ್ದೇಶನ. ಮಳಖೇಡದ ರಾಜಲಕ್ಷ್ಮೀ ಸಿಮೆಂಟ್ ಕಾರ್ಖಾನೆ, ಕಲಬುರ್ಗಿಯ ಆಡಳಿತ ಕಛೇರಿಗಳಲ್ಲಿ ಭಿತ್ತಿಚಿತ್ರ ರಚನೆ, ಪಠ್ಯ ಪುಸ್ತಕ ಸಮಿತಿ, ಕಲಾ ಕಾಲೇಜುಗಳ ಸಮಿತಿಗಳಲ್ಲಿ ಸದಸ್ಯ; ಕಲಾ ಪುಸ್ತಕಗಳ ಪ್ರಕಾಶಕ ಹಾಗೂ ಕಲಾ ಬರಹಗಳ ಲೇಖಕ. ಕಲಾ ಕಾಲೇಜು, ಕಲಾ ಶಾಲೆಗಳಲ್ಲಿ ಸಂದರ್ಶಕ ಉಪನ್ಯಾಸಕ. ಪುಸ್ತಕಗಳಿಗೆ, ರಕ್ಷಾಪುಟಗಳಿಗೆ ಕರಪತ್ರ, ಆಹ್ವಾನ ಪತ್ರಗಳಿಗೆ ವಿನ್ಯಾಸಕಾರ. ಎಂ.ಎಂ.ಕೆ. ಕಾಲೇಜ್ ಆಫ್ ವಿಷುಯಲ್ ಆರ್ಟ್, ಐಡಿಯಲ್ ಫೈನ್ ಆರ್ಟ್ ಸೊಸೈಟಿ ಕಲಬುರ್ಗಿಯ ಪ್ರಾಂಶುಪಾಲ.

